KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ನವೆಂಬರ್ ೨, ೨೦೦೬ (ಕಾರ್ತಿಕ ೧೧, ಶಕ ವರ್ಷ ೧೯೨೮) | ಸಂಚಿಕೆ ೪೩ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಸಹ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 97, ದಿನಾಂಕ: 4.7.1997.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 27 ಸಸಿವಿ 98, ದಿನಾಂಕ: 14.7.1998.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸಸಿವಿ 99, ದಿನಾಂಕ: 5.7.1999.
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸಸಿವಿ 99, ದಿನಾಂಕ: 30.10.2000.
5) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 50 ಸಸಿವಿ 2003, ದಿನಾಂಕ: 23.7.2003.
6) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 70 ಸಸಿವಿ 2004, ದಿನಾಂಕ: 4.10.2004.
7) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 2006, ದಿನಾಂಕ: 8.6.2006.
8) ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 222 ಸೇಸೆಎ 2006, ದಿನಾಂಕ: 20.7.2006.

**ಪ್ರಸ್ತಾವನೆ:**

ಕ್ರಮ ಸಂಖ್ಯೆ: (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯಲ್ಲಿ ತಾಂತ್ರಿಕ ವಿಷಯಗಳನ್ನು ನಿರ್ವಹಿಸಲು ಅನುಕೂಲವಾಗುವಂತೆ ಸಹ ಕಾರ್ಯದರ್ಶಿ ಹುದ್ದೆಯೊಂದನ್ನು ಕೆಳಕಂಡ ತಾಂತ್ರಿಕ ಸಿಬ್ಬಂದಿ ವರ್ಗದೊಡನೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ. ಹಾಗೂ ಈ ಹುದ್ದೆಯು ಅಸ್ತಿತ್ವದಲ್ಲಿರುವವರೆಗೂ ಮುಖ್ಯ ಅಭಿಯಂತರರು (ಸಂಪರ್ಕ ಮತ್ತು ಕಟ್ಟಡ) (ಉತ್ತರ) ಧಾರವಾಡ ಇವರ ಅಧೀನದಲ್ಲಿರುವ ಅಧೀಕ್ಷಕ ಅಭಿಯಂತರರು (ವಿನ್ಯಾಸ) ಹುದ್ದೆ ಹಾಗೂ ಮುಖ್ಯ ಅಭಿಯಂತರರು (ಸಂಪರ್ಕ ಮತ್ತು ಕಟ್ಟಡ) (ದಕ್ಷಿಣ) ಬೆಂಗಳೂರು ಹುದ್ದೆ ಹಾಗೂ ಮುಖ್ಯ ಅಭಿಯಂತರರು ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ಇಲ್ಲಿನ ತಾಂತ್ರಿಕ ಸಿಬ್ಬಂದಿ ವರ್ಗದ ಹುದ್ದೆಗಳು ಇವುಗಳನ್ನು ತುಂಬದೆ ನಿಲಂಬನೆಯಲ್ಲಿಡಲು ಆದೇಶಿಸಲಾಗಿದೆ. ಸಹ ಕಾರ್ಯದರ್ಶಿ ಹುದ್ದೆಯನ್ನು ಹಾಗೂ ತಾಂತ್ರಿಕ ಸಿಬ್ಬಂದಿ ವರ್ಗದ ಹುದ್ದೆಗಳನ್ನು ಪುನರ್ ಅಭಿ ನಿಯೋಜನೆಯ ಮೂಲಕ ಭರ್ತಿ ಮಾಡಲು ಸಹ ಸದರಿ ಆದೇಶದಲ್ಲಿ ತಿಳಿಸಲಾಗಿದೆ.

| | | |
|---|---|---|
| ಅ. | ಅಧೀನ ಕಾರ್ಯದರ್ಶಿ (ಸಹಾಯಕ ಕಾರ್ಯಪಾಲಕ ಅಭಿಯಂತರರು) | 2 ಹುದ್ದೆಗಳು |
| ಆ. | ಸಹಾಯಕ ಅಭಿಯಂತರರು | 4 ಹುದ್ದೆಗಳು |
| ಇ. | ಕಿರಿಯ ಅಭಿಯಂತರರು | 2 ಹುದ್ದೆಗಳು |
| ಈ. | ಕಿರಿಯ ಸಹಾಯಕ : ದ್ವಿತೀಯ ದರ್ಜೆ ಸಹಾಯಕ | 2 ಹುದ್ದೆಗಳು |
| ಉ. | ಬೆರಳಚ್ಚುಗಾರರು | 2 ಹುದ್ದೆಗಳು |
| ಊ. | ದಲಾಯತ್ | 2 ಹುದ್ದೆಗಳು |

ನಂತರ ಕ್ರಮ ಸಂಖ್ಯೆ (2) ರಿಂದ (6) ರವರೆಗೆ ಓದಲಾಗಿರುವ ಆದೇಶಗಳಲ್ಲಿ ಈ ಹುದ್ದೆಗಳನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಅಂತಿಮವಾಗಿ ವಿಸ್ತರಿಸಲಾದ ಅವಧಿಯು ದಿನಾಂಕ: 3.7.2006ಕ್ಕೆ ಮುಕ್ತಾಯಗೊಂಡಿರುತ್ತದೆ.

ಕ್ರಮ ಸಂಖ್ಯೆ (7)ರ ಸರ್ಕಾರದ ಆದೇಶದಲ್ಲಿ ಪ್ರಸ್ತುತ ಲೋಕೋಪಯೋಗಿ ಇಲಾಖೆಯಲ್ಲಿ ಅಸ್ತಿತ್ವದಲ್ಲಿರುವ ಸರ್ಕಾರದ ಅಧೀನ ಕಾರ್ಯದರ್ಶಿ (ನಬಾರ್ಡ್) ಹುದ್ದೆಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಿ ವಿಶೇಷಾಧಿಕಾರಿ ಹುದ್ದೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಎ) ಇವರು ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಈ ಎಲ್ಲಾ ಹುದ್ದೆಗಳನ್ನು ದಿನಾಂಕ: 4.7.2006 ರಿಂದ 3.7.2007 ರವರೆಗೆ ಮುಂದುವರೆಸುವ ಅಗತ್ಯತೆ ಇರುವುದರಿಂದ ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಸಸಿವಿ 2006, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2006**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಲೋಕೋಪಯೋಗಿ ಇಲಾಖೆಯ ಸಹ ಕಾರ್ಯದರ್ಶಿ ಹುದ್ದೆಯನ್ನು ಈಗಿರುವ ಷರತ್ತುಗಳ ಆಧಾರದ ಮೇಲೆ ದಿನಾಂಕ: 4.7.2006 ರಿಂದ 3.7.2007 ರವರೆವಿಗೆ ಈ ಕೆಳಕಂಡ ಹುದ್ದೆಗಳೊಂದಿಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| ಅ. | ಅಧೀನ ಕಾರ್ಯದರ್ಶಿ (ಇ.ಎ.ಪಿ.)<br>(ಸಹಾಯಕ ಕಾರ್ಯಪಾಲಕ ಅಭಿಯಂತರರು) | 1 ಹುದ್ದೆ |
| ಆ. | ಸಹಾಯಕ ಅಭಿಯಂತರರು | 4 ಹುದ್ದೆಗಳು |
| ಇ. | ಕಿರಿಯ ಅಭಿಯಂತರರು | 2 ಹುದ್ದೆಗಳು |
| ಈ. | ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕ | 2 ಹುದ್ದೆಗಳು |
| ಉ. | ಬೆರಳಚ್ಚುಗಾರರು | 2 ಹುದ್ದೆಗಳು |
| ಊ. | ದಲಾಯತ್ | 2 ಹುದ್ದೆಗಳು |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಸಹಮತಿ ನೀಡಿರುವುದೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ನಾಗೇಂದ್ರ**
ಪಿ.ಆರ್. 1262 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಸಹಕಾರ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ನಿಮ್ನೀಕರಿಸಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಡಿಪಿಎಆರ್ 306 ಎಸ್‌ಎಎಸ್ 2006 ದಿನಾಂಕ: 20.6.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಪಿ.ರವಿಕುಮಾರ್, ಐಎಎಸ್, ಇವರನ್ನು ಸಹಕಾರ ಇಲಾಖೆಯ ನಿಮ್ನೀಕರಿಸಿದ ಕಾರ್ಯದರ್ಶಿ ಹುದ್ದೆಗೆ ಆದೇಶ ಹೊರಡಿಸಿರುವ ದಿನಾಂಕದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ. ಆದ್ದರಿಂದ ಸಹಕಾರ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸುವ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 54 ಸಸಿವಿ 2006, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ ಸಹಕಾರ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಶ್ರೀ ಪಿ.ರವಿಕುಮಾರ್, ಐಎಎಸ್ ಇವರು ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸಿ ಮುಂದುವರೆಸಲಾಗಿದೆ.

ಸದರಿ ಹುದ್ದೆಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 305 ಶಿಸಾಸೇ 2000, ದಿನಾಂಕ: 8.6.2001 ರಲ್ಲಿ ನಿಗಧಿಪಡಿಸಿರುವಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ನಾಗೇಂದ್ರ**
ಪಿ.ಆರ್. 1261 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು–2).

**ವಿಷಯ:** ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಹಿರಿಯ ವಾರ್ತಾಧಿಕಾರಿ (ಗ್ರೂಪ್ ^ಎ^) ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಟಿಪ್ಪಣಿ ಸಂಖ್ಯೆ: ಸಿಎಂ/1102/ಎಸ್‌ಐಪಿ/2006 ದಿನಾಂಕ: 10.4.2006.
2) ಟಿಪ್ಪಣಿ ಸಂಖ್ಯೆ: ಸಿಎಂ/193/ಜೆಇಎಸ್/2006, ದಿನಾಂಕ: 5.6.2006.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 148 ಸಆಸೇ 2006, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2006**

ಮೇಲೆ ಓದಲಾಗಿರುವ ಟಿಪ್ಪಣಿಗಳಲ್ಲಿ ಮಾನ್ಯ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಒಂದು ಗ್ರೂಪ್–ಎ ಹುದ್ದೆಯನ್ನು ಸೃಜಿಸಿ ಶ್ರೀಮತಿ ಬಿ.ಆರ್.ಮಮತಾ, ಉಪ ನಿರ್ದೇಶಕರು, ವಾರ್ತಾ ಇಲಾಖೆ ಇವರನ್ನು ಹಿರಿಯ ವಾರ್ತಾಧಿಕಾರಿಯಾಗಿ ನೇಮಿಸುವಂತೆ ಕೋರಲಾಗಿದೆ. ಅದರಂತೆ ಮಾನ್ಯ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಅವರನ್ನು ನೇಮಿಸಲು ರೂ.9580–14200ರ ವೇತನ ಶ್ರೇಣಿಯ ಒಂದು ಗ್ರೂಪ್–ಎ ಹುದ್ದೆಯನ್ನು ದಿನಾಂಕ:5.6.2006 ರಿಂದ ಜಾರಿಗೆ

ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಅಧಿಕಾರಿಯವರ ಸೇವೆಯು ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಅವಶ್ಯವಿರುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1144 ವೆಚ್ಚ-5/2006, ದಿನಾಂಕ: 20.7.2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

**ಪಿ.ಆರ್. 1264** ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಗಣಕೀಕರಣ ವಿಭಾಗದಲ್ಲಿನ ಉನ್ನತೀಕರಿಸಲಾದ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 13 ಜಿಎಇ 2005, ದಿನಾಂಕ: 29.9.2005.

**ಪ್ರಸ್ತಾವನೆ:**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 45 ಸಸಿವಿ 99, ದಿನಾಂಕ: 20.1.2000 ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಗಣಕೀಕರಣ ವಿಭಾಗದಲ್ಲಿನ ಶಾಖಾಧಿಕಾರಿ ಹುದ್ದೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿದ್ದು, ಈ ಹುದ್ದೆಯ ಅವಧಿಯು ದಿನಾಂಕ: 19.1.2001ಕ್ಕೆ ಕೊನೆಗೊಂಡಿದೆ ಎಂದು ಹಾಗೂ ಸದರಿ ಹುದ್ದೆಯು ಅತ್ಯಂತ ಅಗತ್ಯವಾಗಿರುವುದರಿಂದ ಈ ಹುದ್ದೆಯನ್ನು ದಿನಾಂಕ: 20.1.2001ರಿಂದ ಶಾಶ್ವತವಾಗಿ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 31 ಸಸಿವಿ 2004, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2006**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 45 ಸಸಿವಿ 99, ದಿನಾಂಕ: 20.1.2000 ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಆರ್ಥಿಕ ಇಲಾಖೆಯ ಗಣಕೀಕರಣ ವಿಭಾಗದಲ್ಲಿನ ಉನ್ನತೀಕರಿಸಿದ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 20.1.2000 ದಿಂದ 20.1.2007 ರವರೆಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆಃ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕಃ 10.7.1996 ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

**ಪಿ.ಆರ್. 1285** ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

ವಿಷಯ: ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2006-07ನೇ ಸಾಲಿನ ಕ್ರಿಯಾ ಯೋಜನೆಗೆ ಅನುಮೋದನೆ ನೀಡುವ ಬಗ್ಗೆ

ಓದಲಾಗಿದೆ: 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006 ದಿ: 7-4-2006

2) ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಅಪ:ಕಾ-1:ಲೆಕ್ಕಯೋಜನೆ:2006-07 ದಿನಾಂಕ 28-4-2006

ಪ್ರಸ್ತಾವನೆ:

ಮೇಲೆ ಓದಲಾದ (1)ರ ದಿನಾಂಕ 7-4-2006ರ ಸರ್ಕಾರದ ಆದೇಶದಲ್ಲಿ ಇತರ ಇಲಾಖೆಗಳೊಡನೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮುಂದುವರಿದ ಯೋಜನೆಗಳಿಗೆ ಅನುಮೋದನೆ ನೀಡಲಾಯಿತು. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 28-4-2006ರ ಪತ್ರದಲ್ಲಿ 2006-07ನೇ ಸಾಲಿನಲ್ಲಿ ಪ್ರಾಧಿಕಾರದಿಂದ ಅನುಷ್ಠಾನಗೊಳಿಸಲು ಯೋಜಿಸಿರುವ ಕ್ರಿಯಾ ಯೋಜನೆಗೆ ಅನುಮೋದನೆ ನೀಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಂಕಇ 20 ಕೆಓಎಲ್ 2006 ದಿನಾಂಕ 24ನೇ ಆಗಸ್ಟ್ 2006**

ಕನ್ನಡ ಅಭಿವೃದ್ಧಿ ಪ್ರಾಧಿಕಾರವು 2006-07ನೇ ಸಾಲಿನಲ್ಲಿ ಒಟ್ಟು 25.00ಲಕ್ಷ ರೂ.ಗಳ ವೆಚ್ಚದಲ್ಲಿ ಕೈಗೊಳ್ಳಲಿರುವ ಕ್ರಿಯಾ ಯೋಜನೆಗೆ ಈ ಆದೇಶದಲ್ಲಿ ಅನುಬಂಧಿಸಿರುವ ಕ್ರಿಯಾ ಯೋಜನೆಗಳಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 490 ಐಎಫ್(ಬಿಎ) 2006 ದಿನಾಂಕ 28-7-2006ರಲ್ಲಿ ನೀಡಿರುವ ಸಹಮತಿಯೊಡನೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

ಆದೇಶ ಸಂಖ್ಯೆ: ಸಂಕಇ 20 ಕೆಓಎಲ್ 2006 ದಿನಾಂಕ 24.08.2006
ಅನುಬಂಧ

## ಕನ್ನಡ ಅಭಿವೃದ್ಧಿ ಪ್ರಾಧಿಕಾರ

## ಕನ್ನಡ ಅಭಿವೃದ್ಧಿ ಪ್ರಾಧಿಕಾರವು 2006–07ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಯೋಜಿಸಿರುವ ಕ್ರಿಯಾ ಯೋಜನೆಗಳು ಮತ್ತು ಅಂದಾಜು ಆಯವ್ಯಯ

2205–00–102–4–01 (ಯೋಜನೆಯ ಶೀರ್ಷಿಕೆಯಲ್ಲಿ)

| ಕ್ರ. ಸಂ. | ಯೋಜನೆ | ಯೋಜನೆಯ ವಿವರ | ಅಂದಾಜು ವೆಚ್ಚ |
|---|---|---|---|
| 1 | ಆಡಳಿತದಲ್ಲಿ ಕನ್ನಡ ಅನುಷ್ಠಾನ | 1) ವಿಚಾರ ಸಂಕಿರಣ, ಕಮ್ಮಟ, ಸಮಾವೇಶ ಇತ್ಯಾದಿ<br>2) ನ್ಯಾಯಾಂಗದಲ್ಲಿ ಕನ್ನಡ ಅನುಷ್ಠಾನ<br>3) ಕರ್ನಾಟಕದಲ್ಲಿರುವ ಕನ್ನಡೇತರ ಭಾಷಾ ಅಲ್ಪಸಂಖ್ಯಾತರಿಗೆ ಕನ್ನಡ ಜಾಗೃತಿ ಮೂಡಿಸುವುದಕ್ಕೆ ಸಂಬಂಧಿಸಿದಂತೆ ಸಭೆ, ಸಂಕಿರಣ ಸಮಾವೇಶ ಇತ್ಯಾದಿ<br>4) ಕನ್ನಡ ಅಭಿವೃದ್ಧಿಗೆ ಸಂಬಂಧಿಸಿದ ವಿಡಿಯೋ ಚಲನಚಿತ್ರ ಇತ್ಯಾದಿ<br>5) ಕರ್ನಾಟಕ ರಾಜ್ಯದ ಒಳಭಾಗದ ಗಡಿ ಪ್ರದೇಶಗಳಲ್ಲಿ ಹಾಗೂ ರಾಜ್ಯದ ಗಡಿಭಾಗಕ್ಕೆ ಹೊಂದಿಕೊಂಡಿರುವ ಹಾಗೂ ಹೊರರಾಜ್ಯದ ಪ್ರದೇಶದಲ್ಲಿರುವ ಕನ್ನಡಿಗರ ಸ್ಥಿತಿ–ಗತಿಗಳಿಗೆ ಸಂಬಂಧಿಸಿದಂತೆ ವಿಚಾರ ಸಂಕಿರಣ, ಕಮ್ಮಟ ಹಾಗೂ ಸಮಾವೇಶಗಳು<br>6) ಹೊರನಾಡು ಕನ್ನಡಿಗರಿಗಾಗಿ ವಿಚಾರ ಸಂಕಿರಣ, ಕಮ್ಮಟ ಸಮಾವೇಶ ಇತ್ಯಾದಿ<br>7) ಕನ್ನಡ ಜಾಗೃತಿ ಸಮಿತಿಗಳ ಸದಸ್ಯರುಗಳ ಪ್ರಯಾಣಕ್ಕೆ ಭತ್ಯೆ ಹಾಗೂ ಉಪಸ್ಥಿತಿಭತ್ಯೆ, ಕನ್ನಡ ಅನುಷ್ಠಾನಕ್ಕೆ ಸಂಬಂಧಿಸಿದ ಪೂರಕ ಕಾರ್ಯಕ್ರಮಗಳು.<br>8) ಶಿಕ್ಷಣದ ಎಲ್ಲಾ ಹಂತಗಳಲ್ಲಿ ಕನ್ನಡ ಅನುಷ್ಠಾನದ ಹಾಗೂ ಸಾಂಸ್ಕೃತಿಕ ವಲಯ, ಸಂಘ ಸಂಸ್ಥೆಗಳಲ್ಲಿ ಕನ್ನಡದ ಸ್ಥಾನಮಾನದ ಬಗ್ಗೆ ಇತರೆ ಅಕಾಡೆಮಿಗಳ ಸಹಯೋಗದಲ್ಲಿ ವಿಚಾರ ಸಂಕಿರಣ, ಸಮಾಲೋಚನೆ ಹಾಗೂ ಸಭೆ ಸಮಾರಂಭಗಳನ್ನು ನಡೆಸುವುದು. | 4.00 ಲಕ್ಷ |
| 2 | ಡಾ॥ ಸರೋಜಿನಿಮಹಿಷಿ ವರದಿಯ ಶಿಫಾರಸ್ಸುಗಳ ಅನುಷ್ಠಾನ | 1) ವಿಚಾರ ಸಂಕಿರಣ, ಕಮ್ಮಟ, ಸಮಾವೇಶ ಬಹು ಮಾಧ್ಯಮ ಪ್ರಚಾರ ಇತ್ಯಾದಿ<br>2) ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಉದ್ದಿಮೆಗಳ ಹಾಗೂ ಖಾಸಗಿ ಉದ್ದಿಮೆಗಳಲ್ಲಿರುವ ಕನ್ನಡಪರ ಸಂಘ ಸಂಸ್ಥೆಗಳ ಪದಾಧಿಕಾರಿಗಳ ರಾಜ್ಯ ಮತ್ತು ಜಿಲ್ಲಾವಾರು ಸಮಾಲೋಚನಾ ಸಭೆ ಇತ್ಯಾದಿ ನಡೆಸುವ ಬಗ್ಗೆ. | 2.00 ಲಕ್ಷ |
| 3 | ಕನ್ನಡ ಸಂಸ್ಕೃತಿ ಶಿಬಿರ | ಇದು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅನುಷ್ಠಾನಗೊಳಿಸುತ್ತಿರುವ ಒಂದು ಜನಪ್ರಿಯ ಯೋಜನೆಯಾಗಿದ್ದು, ಈ ಯೋಜನೆಯು ಪ್ರಾರಂಭವಾದಂದಿನಿಂದ ಸುಮಾರು 130ಕ್ಕೂ ಹೆಚ್ಚು ಸಂಸ್ಕೃತಿ ಶಿಬಿರಗಳನ್ನು ವ್ಯವಸ್ಥೆಗೊಳಿಸಲಾಗಿದೆ. ಈ ವರ್ಷ ಸುಮಾರು 50 ಸಂಸ್ಕೃತಿ ಶಿಬಿರಗಳನ್ನು ನಡೆಸಲು ಯೋಜಿಸಲಾಗಿದೆ. | 2.00 ಲಕ್ಷ |
| 4 | ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರಿಗೆ ಕನ್ನಡ ಕಲಿಕೆ | ಭಾಷಾ ಅಲ್ಪಸಂಖ್ಯಾತರಿಗೆ ಹಾಗೂ ಕನ್ನಡ ಬಾರದವರಿಗೆ ಕನ್ನಡ ಕಲಿಕಾ ಕೇಂದ್ರಗಳನ್ನು ನಡೆಸಲು ಹಾಗೂ ಮದರಸಾಗಳಲ್ಲಿ ಕನ್ನಡ ಕಲಿಸುವ ಯೋಜನೆ ಬಗ್ಗೆ. | 2.00 ಲಕ್ಷ |
| 5 | ಅಕರ ಸಾಹಿತ್ಯ ಯೋಜನೆ | ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಪ್ರಕಟಿಸುವ ಗ್ರಂಥಗಳ ಪ್ರಕಟಣೆಯ ಬಗ್ಗೆ | 2.00 ಲಕ್ಷ |
| 6 | ಜನತೆಯತ್ತ ಕನ್ನಡ | ಈ ಸಾಲಿನಿಂದ ವಿಶೇಷವಾಗಿ ವಿದ್ಯಾರ್ಥಿ ಮತ್ತು ಯುವ ಸಮುದಾಯಕ್ಕೆ ಕನ್ನಡ ನಾಡು ನುಡಿಯ ಪರಂಪರೆಯ ಪರಿಚಯ ಮಾಡಿಕೊಡುವ ದೃಷ್ಟಿಯಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಒಂದು ಅತ್ಯಂತ ಸೃಜನಶೀಲವಾದ ಜನತೆಯತ್ತ ಕನ್ನಡ ಕಾರ್ಯಕ್ರಮ ಈಗ ಅನುಷ್ಠಾನಗೊಳ್ಳುತ್ತಿದ್ದು ಈ ಯೋಜನೆಯನ್ನು ಸಹ ಮುಂದಿನ ಸಾಲಿಗೆ ಮುಂದುವರಿಸಲು ಯೋಜಿಸಲಾಗಿದೆ. | 2.00 ಲಕ್ಷ |

| ಕ್ರ. ಸಂ. | ಯೋಜನೆ | ಯೋಜನೆಯ ವಿವರ | ಅಂದಾಜು ವೆಚ್ಚ |
|---|---|---|---|
| 7 | ಕನ್ನಡ ಮಾಧ್ಯಮ ಪ್ರಶಸ್ತಿ | ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ.ಯಲ್ಲಿ ಕನ್ನಡ ಮಾಧ್ಯಮದಲ್ಲಿ ಅತಿ ಹೆಚ್ಚು ಅಂಕಗಳನ್ನು ಗಳಿಸಿದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಕನ್ನಡ ಮಾಧ್ಯಮದಲ್ಲಿ ಪ್ರಶಸ್ತಿಯನ್ನು ನೀಡುವುದು, ಹೊರನಾಡು ಕಾಲೇಜು ವಿಶ್ವವಿದ್ಯಾನಿಲಯದಲ್ಲಿ ಎಂ.ಎ. ಕನ್ನಡ ಪದವಿ ತರಗತಿಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಉತ್ತೇಜಕ ಬಹುಮಾನ ನೀಡುವುದು. | 3.00 ಲಕ್ಷ |
| 8 | ಕಂಪ್ಯೂಟರ್‌ನಲ್ಲಿ ಕನ್ನಡ ಯೋಜನೆ | ಕಂಪ್ಯೂಟರ್‌ನಲ್ಲಿ ಕನ್ನಡವನ್ನು ಉಪಯೋಗಿಸುವ ಬಗ್ಗೆ ಅವಶ್ಯವಾದ ವಿವಿಧ ಸಾಫ್ಟ್‌ವೇರ್ (ತಂತ್ರಾಂಶ) ಗಳ ತಯಾರಿಕೆ, ತರಬೇತಿ ವಿಚಾರ ಸಂಕಿರಣ ಇತ್ಯಾದಿಗಳ ಬಗ್ಗೆ. | 2.00 ಲಕ್ಷ |
| 9 | ನಾಡಗೀತೆಗಳ ಮೂಲಕ ಕನ್ನಡ ಪ್ರಚಾರ | ಯುವ ಜನತೆಯಲ್ಲಿ ಮತ್ತು ವಿದ್ಯಾರ್ಥಿಗಳಲ್ಲಿ ಅಭಿಮಾನ ಮೂಡಿಸಲು ಸಾಧ್ಯವಾಗುವಂತಹ ಪ್ರಖ್ಯಾತ ಕವಿಗಳ ನಾಡಗೀತೆಗಳ ವಾಚನ ಕಾರ್ಯಕ್ರಮ ನಡೆಸುವ ಬಗ್ಗೆ. | 1.50 ಲಕ್ಷ |
| 10 | ಕನ್ನಡ ಪ್ರಚಾರ ಸಾಮಗ್ರಿಗಳು | ಕನ್ನಡ ಪರ ಪ್ರಚಾರಕ್ಕಾಗಿ ಅಂಟು ಚೀಟಿಗಳು, ಕರಪತ್ರಗಳು ಹಾಗೂ ಆಕಾಶವಾಣಿ, ದೂರದರ್ಶನ ಪತ್ರಿಕೆಗಳಲ್ಲಿ ಪ್ರಚಾರಗಳು ಮುಂತಾದ ಕಾರ್ಯಕ್ರಮಗಳು ನಡೆಸುವ ಬಗ್ಗೆ. | 1.50 ಲಕ್ಷ |
| 11 | ಹೊರನಾಡು ಶಾಲೆಗಳಲ್ಲಿ ಕನ್ನಡ ಪರ ಕಾರ್ಯಕ್ರಮ | ಗಡಿ ತಾಲ್ಲೂಕು ಪ್ರದೇಶಗಳಲ್ಲಿ, ಶಾಲೆಗಳಲ್ಲಿ ಕನ್ನಡಪರ ಕಾರ್ಯಕ್ರಮ | 1.00 ಲಕ್ಷ |
| 12 | ಗಡಿ ತಾ: ಪ್ರದೇಶಗಳಲ್ಲಿ ಕನ್ನಡ ಜಾಗೃತಿ ಸಮಾವೇಶ | ರಾಜ್ಯದ ಒಟ್ಟು 52 ಗಡಿ ತಾ: ಪ್ರದೇಶಗಳಲ್ಲಿ ಕನ್ನಡ ಜಾಗೃತಿ ಸಮಾವೇಶ ಏರ್ಪಡಿಸುವ ಬಗ್ಗೆ. | 2.00 ಲಕ್ಷ |
| | | ಒಟ್ಟು | **25.00 ಲಕ್ಷ** |

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 1276

**ವಿಷಯ:** ಶ್ರೀ ಎಸ್.ಎ. ಜಗನ್ನಾಥ್, ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಇವರಿಗೆ 20 ವರ್ಷಗಳಿಗೆ ನೀಡುವ ವೇತನ ಬಡ್ತಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ ಎಫ್‌ಡಿ 13 ಎಸ್‌ಆರ್‌ಪಿ 2002, ದಿನಾಂಕ: 9.5.2002.

2) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಗ್ಯಾಇ:ಸಿ(1):5: 2005, ದಿನಾಂಕ: 27.06.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಯಾವುದೇ ಪದೋನ್ನತಿ ಇಲ್ಲದೆ 20 ವರ್ಷಗಳ ಕಾಲ ಒಂದೇ ಹುದ್ದೆಯಲ್ಲಿ ಇರುವ ಸರ್ಕಾರಿ ನೌಕರರಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ. ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 27.6.2005ರ ಪತ್ರದಲ್ಲಿ ಶ್ರೀ ಎಸ್.ಎ.ಜಗನ್ನಾಥ್, ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರು 2.6.1982 ರಿಂದ ಸತತವಾಗಿ ಸಂಪಾದಕ ಹುದ್ದೆಯಲ್ಲೇ ಕಾರ್ಯನಿರ್ವಹಿಸುತ್ತಿದ್ದು ಯಾವುದೇ ಪದೋನ್ನತಿ ಪಡೆದಿರುವುದಿಲ್ಲ ಎಂದು ವರದಿ ಮಾಡಿರುತ್ತಾರೆ. ಈ ಅಧಿಕಾರಿಯು ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದು ಇವರ ಕಾರ್ಯನಿರ್ವಹಣಾ ವರದಿಗಳು ತೃಪ್ತಿಕರವಾಗಿದ್ದು ಮೇಲೆ (1) ರಲ್ಲಿ ಓದಲಾದ ದಿನಾಂಕ: 9.5.2002ರ ಆದೇಶದಲ್ಲಿನ ನಿಬಂಧನೆಗಳನ್ನು ಪೂರೈಸಿರುವುದರಿಂದ ಇವರು ಸಂಪಾದಕ ಹುದ್ದೆಯಲ್ಲಿ 20 ವರ್ಷಗಳು ಪೂರೈಸಿದ 2.6.2002 ರಿಂದ ಇವರಿಗೆ ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಶ್ರೀ ಎಸ್.ಎ.ಜಗನ್ನಾಥ್ ರವರು 20 ವರ್ಷಗಳ ಸೇವೆ ಪೂರೈಸಿದ ದಿನಾಂಕಕ್ಕೆ ರೂ.7400-13200 ವೇತನ ಶ್ರೇಣಿ ಪಡೆಯುತ್ತಿದ್ದರು. ಆದರೆ ದಿನಾಂಕ: 9.5.2002ರ ಆದೇಶದ ಪ್ರಕಾರ ಮೊದಲ 11 ವೇತನ ಶ್ರೇಣಿಗಳಿಗೆ ಮಾತ್ರ 20 ವರ್ಷಗಳ ವೇತನ ಬಡ್ತಿ ನೀಡಲು ಅವಕಾಶವಿದೆ. ಹಾಗೂ 11ನೇ ವೇತನ ಶ್ರೇಣಿಯು 6000-11200 ಆಗಿರುತ್ತದೆ. ಈ ಪರಿಸ್ಥಿತಿಯಲ್ಲಿ ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಲಾಗಿ ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಎಫ್‌ಡಿ 819 ಇಎಕ್ಸ್‌ಪಿ-5/2006 ದಿನಾಂಕ: 6.6.2006 ರಲ್ಲಿ ಕರ್ನಾಟಕ ಗ್ಯಾಸೆಟಿಯರ್‌ನ ಸಂಪಾದಕರ ಹುದ್ದೆಯು 6000-11200ರ ವೇತನ ಶ್ರೇಣಿಯಲ್ಲಿ ಬರುವುದರಿಂದ ಶ್ರೀ ಎಸ್.ಎ.ಜಗನ್ನಾಥ್‌ರವರು ರೂ.7400-13200ರ ವೇತನ ಶ್ರೇಣಿಯಲ್ಲಿದ್ದರೂ ಸಹ ದಿನಾಂಕ: 9.5.2002ರ ಆದೇಶದಂತೆ ಅವರಿಗೆ ಹೆಚ್ಚುವರಿ ವೇತನ ಬಡ್ತಿ ಮಂಜೂರು ಮಾಡುವುದನ್ನು ಪರಿಗಣಿಸಬಹುದೆಂದು ಅಭಿಪ್ರಾಯ ನೀಡಿದೆ. ಅದರಂತೆ ಪ್ರಕರಣವನ್ನು ಪರಿಗಣಿಸಿದ ನಂತರ ಈ ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 29 ಕರಾಗೆ 2004, ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2006**

ಶ್ರೀ ಎಸ್.ಎ. ಜಗನ್ನಾಥ್, ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರು ಅದೇ ಹುದ್ದೆಯಲ್ಲಿ 20 ವರ್ಷಗಳನ್ನು ಪೂರೈಸಿದ ದಿನಾಂಕ: 2.6.2002 ರಿಂದ ಜಾರಿಗೆ ಬರುವಂತೆ ಅವರಿಗೆ ವೇತನ ಶ್ರೇಣಿ ರೂ.7400-200-8800-260-10880-320-13120 ರಲ್ಲಿ ಒಂದು ವೇತನ ಬಡ್ತಿಯನ್ನು ಮಂಜೂರು ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಎಫ್‌ಡಿ 819 ವೆಚ್ಚ-5/2006 ದಿನಾಂಕ: 6.6.2006 ರಲ್ಲಿ ನೀಡಿದ ಅಭಿಪ್ರಾಯದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1366 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಜಿ.ಕೆ. ರಾಜಣ್ಣ, ಉಪನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಮೈಸೂರು ಇವರನ್ನು ಅಮಾನತ್ತು ಮಾಡುವ ಬಗ್ಗೆ.

**ಓದಲಾಗಿದೆ:** ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ.23/ಸಿಆರ್-12/2006/ಮೈಸೂರು, ದಿನಾಂಕ: 31.08.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತರವರು ಈ ಪ್ರಕರಣದ ಬಗ್ಗೆ ವಿವರಗಳನ್ನು ನೀಡಿದ್ದಾರೆ. ದಿನಾಂಕ: 24.08.2006 ರಂದು ಶ್ರೀ ರಘೋತ್ತಮ ಬಿನ್ ಸರ್ವೋತ್ತಮ, ಮೈಸೂರು ಇವರು ಮೈಸೂರು ಲೋಕಾಯುಕ್ತ ಕಛೇರಿಗೆ ಖುದ್ದಾಗಿ ಹಾಜರಾಗಿ ಶ್ರೀ ಜಿ.ಕೆ.ರಾಜಣ್ಣ, ಉಪನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಮೈಸೂರುರವರು ದಿನಾಂಕ: 8.8.2006 ರಂದು ಇವರ ಅಂಗಡಿಯ ಮೇಲೆ ಇಲಾಖೆಯ ಸಿಬ್ಬಂದಿಯೊಂದಿಗೆ ದಾಳಿ ಮಾಡಿ ಪರಿಶೀಲಿಸಿ ದಿನಾಂಕ: 23.8.2006 ರಂದು ಫಿರ್ಯಾದುದಾರರನ್ನು ಮೈಸೂರಿನ ರಮ್ಯ ಹೋಟೆಲ್ ಬಳಿ ಬರಲು ತಿಳಿಸಿ, ರೂ.10,000/- ಹಣವನ್ನು ಕೊಡಬೇಕೆಂದು ಒತ್ತಾಯಿಸಿದ್ದು, ಇಲ್ಲದಿದ್ದಲ್ಲಿ ಮತ್ತೆ ದಾಳಿ ಮಾಡುವುದಾಗಿ ತಿಳಿಸಿ ಹಣವನ್ನು ದಿನಾಂಕ: 24.8.2006 ರಂದು ಅದೇ ಹೋಟೆಲ್ ಬಳಿ ತಂದು ಕೊಡಲು ತಿಳಿಸಿರುತ್ತಾರೆಂದು ವರದಿ ಮಾಡಿದ್ದಾರೆ. ಫಿರ್ಯಾದುದಾರರಿಗೆ ಈ ಹಣವನ್ನು ಕೊಡಲು ಇಷ್ಟವಿಲ್ಲದಿರುವುದರಿಂದ, ಮೈಸೂರು ಲೋಕಾಯುಕ್ತ ಕಛೇರಿಗೆ ದೂರು ಸಲ್ಲಿಸಿರುತ್ತಾರೆಂದು, ಈ ಬಗ್ಗೆ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ: 12/2006ನ್ನು ದಿನಾಂಕ: 24.8.2006 ರಂದು ದಾಖಲಿಸಿಕೊಂಡು ತನಿಖೆ ಕೈಗೊಂಡಿರುವುದಾಗಿ ತಿಳಿಸಿದ್ದಾರೆ. ಅಲ್ಲದೆ, ಶ್ರೀ ಜಿ.ಕೆ.ರಾಜಣ್ಣ, ಉಪನಿರ್ದೇಶಕರು, ಫಿರ್ಯಾದುದಾರರಿಂದ ರೂ.10,000/- ಗಳನ್ನು ಲಂಚವಾಗಿ ಸ್ವೀಕರಿಸುತ್ತಿದ್ದಾಗ ಸಿಕ್ಕಿಕೊಂಡು ಆರೋಪಿತ ಅಧಿಕಾರಿಯು ಹಣ ಪಡೆದಿರುವುದು ಸಾಬೀತಾಗಿರುತ್ತದೆ ಎಂದು ವರದಿ ಮಾಡಿರುತ್ತಾರೆ. ಸಾಕ್ಷಿದಾರರೂ ಸಹ ಆರೋಪಿತ ಅಧಿಕಾರಿಯು ಲಂಚವನ್ನು ಪಡೆದಿರುವ ಅಂಶದ ಬಗ್ಗೆ ಸ್ಪಷ್ಟವಾಗಿ ನುಡಿದಿರುತ್ತಾರೆ. ಆದ್ದರಿಂದ ಇವರ ಮೇಲಿನ ಆರೋಪ ಮೇಲುನೋಟಕ್ಕೆ ಸಾಬೀತಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಅಲ್ಲದೆ ಇವರನ್ನು ದಿನಾಂಕ: 24.8.2006 ರಂದು ದಸ್ತಗಿರಿಯಾದ ದಿನದಿಂದಲೇ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿ 1957ರ ನಿಯಮ 10 ರನ್ವಯ ಅಮಾನತ್ತಿನಲ್ಲಿಡುವಂತೆ ಪರಿಗಣಿಸಬಹುದಾಗಿರುತ್ತದೆ ಎಂದು ಸೂಚಿಸಿರುತ್ತಾರೆ. ಆರೋಪಿತ ಅಧಿಕಾರಿಯು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟುಮಾಡುವ, ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಮತ್ತು ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ, ಇವರ ಲೀನ್ (ಸ್ಥಾನ) ವನ್ನು ಬೇರೆ ಕಡೆಗೆ ವರ್ಗಾಯಿಸಿ ಅಮಾನತ್ತಿನಲ್ಲಿಡಲು ಪರಿಗಣಿಸಲು ತಿಳಿಸಿರುತ್ತಾರೆ.

ಈ ಪ್ರಕರಣವನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 139 ಅಇಸೇ 2006, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಜಿ.ಕೆ.ರಾಜಣ್ಣ, ಉಪನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಮೈಸೂರು ಇವರನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)ರ ಉಪನಿಯಮ (1)ರ ಕಲಂ (ಎ) ಮತ್ತು (ಬಿ) ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅವರ ವಿರುದ್ಧದ ಲೋಕಾಯುಕ್ತ ಪ್ರಕರಣದ ವಿಚಾರಣೆಯನ್ನು ಬಾಕಿ ಇರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಶ್ರೀ ಜಿ.ಕೆ.ರಾಜಣ್ಣ ಇವರು ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರಸ್ಥಾನವನ್ನು ಬಿಡುವಂತಿಲ್ಲ.

ಶ್ರೀ ಜಿ.ಕೆ.ರಾಜಣ್ಣ ಇವರು ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ ನಿಯಮ 98 ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್. 1330 ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯಪಾಲರ ಸಚಿವಾಲಯದಲ್ಲಿನ ಹಿಂದಿ ಬೆರಳಚ್ಚುಗಾರರಿಗೆ ಕನ್ನಡ ಭಾಷಾ ಪರೀಕ್ಷೆಯನ್ನು ಪಾಸು ಮಾಡುವುದರಿಂದ ವಿನಾಯಿತಿ ನೀಡುವುದರ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸೆಸೆನಿ 2006, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2006**

**ಓದಲಾಗಿದೆ:** ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 9 ಎಸ್‌ಎಸ್‌ಆರ್ 78, ದಿನಾಂಕ: 27.05.1978.

**ಪ್ರಸ್ತಾವನೆ:**

ಕರ್ನಾಟಕ ಸಿವಿಲ್ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974 ದಿನಾಂಕ: 10.01.1974 ರಿಂದ ಜಾರಿಗೆ ಬಂದಿವೆ. ಈ ನಿಯಮಗಳ ಪ್ರಕಾರ 'ಡಿ' ವೃಂದದ ನೌಕರರನ್ನು ಹೊರತುಪಡಿಸಿ ಉಳಿದ ಎಲ್ಲಾ ಸರ್ಕಾರಿ ನೌಕರರು ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳನ್ನು ನಿಗದಿತ ಅವಧಿಯಲ್ಲಿ ಪಾಸು ಮಾಡದಿದ್ದಲ್ಲಿ, ವಾರ್ಷಿಕ ವೇತನ ಬಡ್ತಿ, ಪದೋನ್ನತಿ ಮತ್ತು ಸ್ಥಿರೀಕರಣಕ್ಕೆ

ಅರ್ಹರಾಗುವುದಿಲ್ಲ. ಆದರೆ, ಕರ್ನಾಟಕ ರಾಜ್ಯಪಾಲರ ಸಚಿವಾಲಯದಲ್ಲಿನ ಹಿಂದಿ ಬೆರಳಚ್ಚುಗಾರರ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವ ನೌಕರರಿಗೆ ಕನ್ನಡ ಭಾಷಾ ಪರೀಕ್ಷೆಯನ್ನು ಪಾಸು ಮಾಡುವುದರಿಂದ ವಿನಾಯಿತಿ ನೀಡಲು ಮಾಡಿರುವ ಪ್ರಸ್ತಾವವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಿವಿಲ್ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರ ನಿಯಮ 3ರ ಉಪ ನಿಯಮ (1)ರ ಪರಂತುಕದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕರ್ನಾಟಕ ರಾಜ್ಯಪಾಲರ ಸಚಿವಾಲಯದಲ್ಲಿ ಹಿಂದಿ ಬೆರಳಚ್ಚುಗಾರರ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವ ನೌಕರರಿಗೆ ದಿನಾಂಕ: 10.3.1999 ರಿಂದಲೇ ಜಾರಿಗೆ ಬರುವಂತೆ ಕನ್ನಡ ಭಾಷಾ ಪರೀಕ್ಷೆಯನ್ನು ಪಾಸು ಮಾಡುವುದರಿಂದ ವಿನಾಯಿತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವರಾಜು**

ಪಿ.ಆರ್. 1331

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-1).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಹುಣಸೂರು ಪಟ್ಟಣ ಹಾಗೂ ಮಾರ್ಗ ಮಧ್ಯದ ಗ್ರಾಮಗಳಿಗೆ ಕಾವೇರಿ ನದಿ ಮೂಲದಿಂದ ರೂ.1825.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು ಮತ್ತು ವ್ಯ.ನಿ., ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ತಾಂತ್ರಿಕ/ಹೆಚ್‌ಎನ್‌ಆರ್/01/4048/2002-03, ದಿನಾಂಕ: 26.02.2003.

2) ಸರ್ಕಾರದ ಆದೇಶ ಸಂಖ್ಯೆ: ನಅಇ 57 ಯುಎಂಎಸ್ 2006(ಪಿ) ದಿನಾಂಕ: 21.8.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪ್ರಸ್ತಾವನೆಯಲ್ಲಿ ಮೈಸೂರು ಜಿಲ್ಲೆಯ ಹುಣಸೂರು ಪಟ್ಟಣದ ಜನಸಂಖ್ಯೆಯ 2001ರ ಜನಗಣತಿ ಪ್ರಕಾರ 42,250 ಪ್ರಸ್ತುತ ಜನಸಂಖ್ಯೆ 45,000 ಹೊಂದಿದ್ದು, 2031ನೇ ಇಸವಿಗೆ ಸುಮಾರು 69,100 ಜನಸಂಖ್ಯೆ ಆಗುವ ನಿರೀಕ್ಷೆ ಇರುತ್ತದೆ. ಪ್ರಸ್ತುತ ಹುಣಸೂರು ಪಟ್ಟಣಕ್ಕೆ ನೀರು ಸರಬರಾಜು ಯೋಜನೆಯನ್ನು ಲಕ್ಷ್ಮಣತೀರ್ಥ ನದಿಯನ್ನು ಮೂಲವಾಗಿಟ್ಟುಕೊಂಡು ಸರ್ಕಾರವು 1974 ರಲ್ಲಿ ಅನುಮೋದನೆಯನ್ನು ನೀಡಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿರುತ್ತದೆ. ಇತ್ತೀಚೆಗೆ ಪಟ್ಟಣದ ವ್ಯಾಪ್ತಿಯಲ್ಲಿ ಹೊಸ ಬಡಾವಣೆಗಳು ಬಂದಿರುವುದರಿಂದ ಜನಸಂಖ್ಯೆ ಹೆಚ್ಚಾದ ಕಾರಣ ಲಕ್ಷ್ಮಣತೀರ್ಥ ನದಿಯಲ್ಲಿ ನೀರಿನ ಹರಿವು ಕಡಿಮೆ ಹಾಗೂ ಕಲುಷಿತಗೊಂಡಿರುವುದರಿಂದ ಬೇರೆ ಮೂಲದಿಂದ ನೀರು ಸರಬರಾಜು ಸುಧಾರಣೆಯ ಅವಶ್ಯಕತೆ ಕಂಡು ಬಂದಿರುತ್ತದೆ. ಆದುದರಿಂದ ಈ ನೀರು ಸರಬರಾಜು ಯೋಜನೆಯನ್ನು ಕಾವೇರಿ ನದಿಯನ್ನು ಮೂಲವಾಗಿಟ್ಟುಕೊಂಡು 2031ನೇ ಇಸವಿಯಲ್ಲಿ ಅಂದಾಜಿಸಲಾದ ಹುಣಸೂರು ಪಟ್ಟಣದ ಜನಸಂಖ್ಯೆ 69,010ಗೆ ದಿನಂಪ್ರತಿ ತಲಾ 135 LPCD ಯಂತೆ ಸಾರ್ವಜನಿಕ ನಲ್ಲಿಗಳಿಗೆ 70 LPCD ಯಂತೆ ಮತ್ತು ಮಾರ್ಗಮಧ್ಯದ ಹಳ್ಳಿಗಳ 33,200 ಜನಸಂಖ್ಯೆಗೆ 70 LPCD ಯಂತೆ ಗೃಹ ಸಂಪರ್ಕಗಳ ಮೂಲಕ ಹಾಗೂ 45 ಲೀಟರ್‌ನಂತೆ ಸಾರ್ವಜನಿಕರಿಗೆ ನಲ್ಲಿಗಳ ಮೂಲಕ ಹೀಗೆ ಒಟ್ಟು 10,30 MLD ನೀರನ್ನು ಒದಗಿಸಲು ಯೋಜನೆಯನ್ನು ರೂಪಿಸಲಾಗಿದೆ.

ಈ ಯೋಜನೆಯಲ್ಲಿ ಮೂಲಸ್ಥಾವರ ಕಾಮಗಾರಿ, ಕಚ್ಚಾ ಹಾಗೂ ಶುದ್ಧ ನೀರಿನ ಕೊಳವೆ ಮಾರ್ಗ, 9.6 ದಶಲಕ್ಷ ಲೀಟರ್ ಸಾಮರ್ಥ್ಯದ ಜಲಶುದ್ಧೀಕರಣ ಘಟಕ ಮೇಲ್ಮಟ್ಟದ ಜಲಸಂಗ್ರಹಾಗಾರ, ವಿತರಣಾ ಕೊಳವೆ ಮಾರ್ಗಗಳಿಗೆ ಅವಕಾಶ ಕಲ್ಪಿಸುವುದು ಹಾಗೂ ಇತರೇ ಕಾಮಗಾರಿಗಳನ್ನು ಕೈಗೊಳ್ಳುವುದು ಅವಶ್ಯವಾಗಿರುವುದರಿಂದ 2002-03ನೇ ಸಾಲಿನ ದರಪಟ್ಟಿಯಂತೆ ಅಂದಾಜು ಮೊತ್ತ ರೂ.1825.00 ಲಕ್ಷಗಳಲ್ಲಿ ಕಾಮಗಾರಿಗಳನ್ನು ಪ್ರಾರಂಭಿಸಲು ಹಾಗೂ ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಈ ಯೋಜನೆಯನ್ನು 2006-07ನೇ ಕ್ರಿಯಾ ಯೋಜನೆಯಲ್ಲಿ ಸೇರಿಸಿಕೊಂಡಿದ್ದು, ಮಂಡಳಿಯು 453.00 ಲಕ್ಷ ರೂ.ಗಳನ್ನು ಮೀಸಲಿರಿಸಿರುವುದರಿಂದ ರೂ.1825.00 ಲಕ್ಷಗಳ ಅಂದಾಜು ವೆಚ್ಚ ತಯಾರಿಸಲಾಗಿದ್ದು, ಅದನ್ನು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಭರಿಸಿ ಹುಣಸೂರು ಪಟ್ಟಣ ಹಾಗೂ ಮಾರ್ಗ ಮಧ್ಯದ ಗ್ರಾಮಗಳಿಗೆ ಕಾವೇರಿ ನದಿ ಮೂಲದಿಂದ ನೀರು ಸರಬರಾಜು ಮಾಡುವ ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

| | | |
|---|---|---|
| 1) | ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ.50) | ರೂ. 759.34 ಲಕ್ಷಗಳು |
| 2) | ಸರ್ಕಾರದ ಅನುದಾನ (ಶೇ.50) | ರೂ. 759.34 ಲಕ್ಷಗಳು |
| 3) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಂತಿಗೆ | ರೂ. 306.32 ಲಕ್ಷಗಳು |
| | **ಒಟ್ಟು** | **ರೂ.1825.00 ಲಕ್ಷಗಳು** |

**ಸರ್ಕಾರಿ ಆದೇಶ ಸಂಖ್ಯೆ: ನಅಇ 77 ಯುಡಬ್ಲ್ಯೂಎಸ್ 2002(ಪಿ), ಬೆಂಗಳೂರು, ದಿನಾಂಕ: 2ನೇ ಸೆಪ್ಟೆಂಬರ್ 2006**

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ಹುಣಸೂರು ಪಟ್ಟಣ ಹಾಗೂ ಮಾರ್ಗ ಮಧ್ಯದ ಗ್ರಾಮಗಳಿಗೆ ಕಾವೇರಿ ನದಿ ಮೂಲದಿಂದ ರೂ.1825.00 ಲಕ್ಷಗಳ (ರೂಪಾಯಿ ಒಂದು ಸಾವಿರದ ಎಂಟುನೂರ ಇಪ್ಪತ್ತೈದು ಲಕ್ಷಗಳು ಮಾತ್ರ) ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಯೋಜನೆಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

(1) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000 ನ್ನು ಪಾಲಿಸುವುದು.

(3) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1341

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ರಾಜ್ಯದ ಅಕಾಡೆಮಿಗಳ ಅಂಗರಚನೆ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 65 ಕರಅ 2003, ದಿನಾಂಕ: 14.03.2005.

2) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಇವರ ಪ.ಸಂ: ಕಸನಿ:8:ಅಕಾಡೆಮಿ: 2006-07, ದಿನಾಂಕ: 19.5.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ರಾಜ್ಯದ ಅಕಾಡೆಮಿಗಳ ಅಂಗರಚನೆ ಮಾಡಲಾಗಿತ್ತು. ಓದಲಾದ (2) ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಇವರು ವಾರ್ಷಿಕ ಪುಸ್ತಕ ಬಹುಮಾನಕ್ಕೆ ಪುಸ್ತಕಗಳನ್ನು ಪರಿಗಣಿಸುವಾಗ ಆಯಾ ಪ್ರಕಾರಗಳಲ್ಲಿ 10 ಶೀರ್ಷಿಕೆಗಳಾದರೂ ಪ್ರಕಟಿಸಬೇಕೆಂದು ಷರತ್ತು ವಿಧಿಸಲಾಗಿದೆ. ಆದರೆ ಕನ್ನಡ ಸಾಹಿತ್ಯ ಅಕಾಡೆಮಿಗೆ ಸಂಬಂಧಿಸಿದಂತೆ ಈ ಷರತ್ತು ಸೂಕ್ತವಾಗುತ್ತಿದ್ದು, ಉಳಿದ ಅಕಾಡೆಮಿಗಳಿಗೆ ಆಯಾಯ ಭಾಷೆಗಳಲ್ಲಿ ಪ್ರತಿ ಪ್ರಕಾರಗಳಲ್ಲಿ 10 ಶೀರ್ಷಿಕೆಗಳು ಪ್ರತ್ಯೇಕವಾಗುವುದು ಕಷ್ಟಸಾಧ್ಯ ಆದ್ದರಿಂದ ಪ್ರತಿ ಪ್ರಕಾರದಲ್ಲಿ ಆ ವರ್ಷ 10 ಶೀರ್ಷಿಕೆಗಳು ಪ್ರಕಟವಾಗಬೇಕೆಂಬ ತಿದ್ದುಪಡಿ ಷರತ್ತನ್ನು ಕೈಬಿಟ್ಟು 3 ಶೀರ್ಷಿಕೆಗಳಾದರೂ ಪ್ರಕಟಿಸಬೇಕೆಂದು ತಿದ್ದುಪಡಿ ಆದೇಶ ಹೊರಡಿಸಲು ಪ್ರಸ್ತಾವನೆ ಸಲ್ಲಿಸಿರುವರು. ಈ ಬಗ್ಗೆ ಎಲ್ಲಾ ಅಕಾಡೆಮಿಗಳ ಅಧ್ಯಕ್ಷರ ಸಭೆ ನಡೆಸಿ ಅವರ ಅಭಿಪ್ರಾಯ ಪಡೆದು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಅಕಾಡೆಮಿಗಳ ಅಂಗರಚನೆಯ ತಿದ್ದುಪಡಿ ಆದೇಶವನ್ನು ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 68 ಕರಅ 2006, ಬೆಂಗಳೂರು, ದಿನಾಂಕ: 30ನೇ ಆಗಸ್ಟ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯನ್ನು ಹೊರತುಪಡಿಸಿ ಈ ಕೆಳಕಂಡ ಅಕಾಡೆಮಿಗಳು ಪುಸ್ತಕ ಬಹುಮಾನಕ್ಕೆ ಪುಸ್ತಕಗಳನ್ನು ಪರಿಗಣಿಸುವಾಗ ಆಯಾ ಪ್ರಕಾರಗಳಲ್ಲಿ ಕನಿಷ್ಠ 10 ಶೀರ್ಷಿಕೆಗಳಾದರೂ ಪ್ರಕಟಿಸಬೇಕೆಂಬ ಈಗಿರುವ ಷರತ್ತನ್ನು ಸಡಿಲಗೊಳಿಸಿ 3 ಶೀರ್ಷಿಕೆಗಳಾದರೂ ಪ್ರಕಟಿಸಬೇಕೆಂದು ತಿದ್ದುಪಡಿ ಮಾಡಲಾಗಿದೆ. ಈ ತಿದ್ದುಪಡಿಯು, ಆದೇಶ ಹೊರಡಿಸಿದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

1. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ
2. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ
3. ಕರ್ನಾಟಕ ನಾಟಕ ಅಕಾಡೆಮಿ
4. ಕರ್ನಾಟಕ ಲಲಿತ ಕಲಾ ಅಕಾಡೆಮಿ
5. ಕರ್ನಾಟಕ ಶಿಲ್ಪಕಲಾ ಅಕಾಡೆಮಿ
6. ಕರ್ನಾಟಕ ಉರ್ದು ಅಕಾಡೆಮಿ
7. ಕರ್ನಾಟಕ ಕೊಂಕಣಿ ಅಕಾಡೆಮಿ
8. ಕರ್ನಾಟಕ ಕೊಡವ ಅಕಾಡೆಮಿ
9. ಕರ್ನಾಟಕ ತುಳು ಅಕಾಡೆಮಿ
10. ಅನುದಾನ ಸಾಹಿತ್ಯ ಅಕಾಡೆಮಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಪಿ.ಆರ್. 1343

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಗುಲ್ಬರ್ಗ ಜಿಲ್ಲೆ, ಮದ್ದಡಗಾದ ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯದ ಕಟ್ಟಡ ನಿರ್ಮಾಣಕ್ಕಾಗಿ ಖಾಲಿ ಒಂದು ಎಕರೆ ನಿವೇಶನವನ್ನು ದಾನ ರೂಪದಲ್ಲಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸಂಖ್ಯೆ: ಸಕನಿ:ಡಬ್ಲ್ಯೂಆರ್ಎಸ್:ಸಿಆರ್ 6:2005-06, ದಿನಾಂಕ: 12.04.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಗುಲ್ಬರ್ಗ ಜಿಲ್ಲೆ ಆಳಂದ ತಾಲ್ಲೂಕು ಮದ್ದಡಗಾ ಗ್ರಾಮದ ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯದ ಕಟ್ಟಡ ನಿರ್ಮಾಣಕ್ಕಾಗಿ ಶ್ರೀಶಿವಶರಣಪ್ಪ ತಂದೆ ಮಾಧವರಾವ್ ಪೊಲೀಸ್ ಪಾಟೀಲ್ ಸಾ: ಮದ್ದಡಗಾ ಇವರು ಒಂದು ಎಕರೆ ಜಮೀನನ್ನು ವಸತಿ ನಿಲಯದ ಹೆಸರನ್ನು ಶ್ರೀಮಾಧರಾವ್ ಪಾಟೀಲ ಸರ್ಕಾರಿ ಬಾಲಕರ ವಸತಿ ನಿಲಯ, ಮದ್ದಡಗಾ, ಎಂಬುದಾಗಿ ನಾಮಕರಣ ಮಾಡುವ ಷರತ್ತಿನನ್ವಯ ದಾನ ರೂಪದಲ್ಲಿ ಕೊಡಲು ಒಪ್ಪಿರುತ್ತಾರೆ.

ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಸರ್ಕಾರಕ್ಕೆ ಸೂಕ್ತ ನಿವೇಶನ ಲಭ್ಯವಾಗುತ್ತಿರುವ ಹಿನ್ನೆಲೆಯಲ್ಲಿ ದಾನಿಗಳ ಹೆಸರನ್ನು ವಿದ್ಯಾರ್ಥಿನಿಲಯಕ್ಕೆ ಇಡಲು ಅಭ್ಯಂತರವಿಲ್ಲವೆಂದು ತಿಳಿಸುತ್ತಾ ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಮದ್ದಡಗಾ, ಆಳಂದ ತಾಲ್ಲೂಕು, ಗುಲ್ಬರ್ಗ ಜಿಲ್ಲೆಯ ಬದಲಾಗಿ ಶ್ರೀ ಮಾಧವರಾವ್ ಪಾಟೀಲ ಸರ್ಕಾರಿ ಬಾಲಕರ ವಸತಿ ನಿಲಯ, ಮದ್ದಡಗಾ ಎಂದು ಪುನರ್ ನಾಮಕರಣ ಮಾಡಲು ಸೂಕ್ತ ಆದೇಶವನ್ನು ಹೊರಡಿಸುವಂತೆ ಆಯುಕ್ತರು ಕೋರಿರುತ್ತಾರೆ. ಆದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 154 ಪಕವಿ 2006, ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2006**

ಗುಲ್ಬರ್ಗ ಜಿಲ್ಲೆ ಆಳಂದ ತಾಲ್ಲೂಕು, ಮದ್ದಡಗಾ ಗ್ರಾಮದಲ್ಲಿರುವ ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯದ ಕಟ್ಟಡ ನಿರ್ಮಾಣಕ್ಕಾಗಿ ಒಂದು ಎಕರೆ ಜಮೀನನ್ನು ದಾನರೂಪದಲ್ಲಿ ನೀಡಲು ಶ್ರೀಶಿವಶರಣಪ್ಪ ತಂದೆ ಮಾಧವರಾವ್ ಪೊಲೀಸ್ ಪಾಟೀಲ್, ಸಾ:ಮದ್ದಡಗಾ,

ಇವರು ಒಪ್ಪಿರುವ ಷರತ್ತಿನ ಮೇಲೆ ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಮದ್ದಡಗಾ, ಆಳಂದ ತಾಲ್ಲೂಕು, ಗುಲ್ಬರ್ಗ ಜಿಲ್ಲೆಯ ಬದಲಾಗಿ ಶ್ರೀಮಾಧವರಾವ್ ಪಾಟೀಲ ಸರ್ಕಾರಿ ಬಾಲಕರ ವಸತಿನಿಲಯ, ಮದ್ದಡಗಾ. ಎಂದು ಪುನರ್ ನಾಮಕರಣ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್. 1350 ಸರ್ಕಾರದ ಅಧೀನ ಕಾರ್ಯದರ್ಶಿ-1, ಸಮಾಜ ಕಲ್ಯಾಣ ಇಲಾಖೆ.

**ವಿಷಯ:** ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಸಾಮಾಜಿಕ ಶೈಕ್ಷಣಿಕ ಮನೆ ಮನೆ ಸಮೀಕ್ಷಾ ಕಾರ್ಯಕ್ಕಾಗಿ 25.50 ಕೋಟಿ ರೂಪಾಯಿಗಳ ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಪತ್ರ ಸಂಖ್ಯೆ: ಕೆ.ಎಸ್.ಸಿ.ಬಿ.ಸಿ/ಲೆಕ್ಕ/ಸರ್ವೆ/ಸಿಆರ್-13/05-06, ದಿನಾಂಕ: 4.10.2005.

2) ಸಂಖ್ಯೆ: ಕರಾಹಿಂವಾ/ಸಕೋ/ಸಿಆರ್-17/04-05, ದಿನಾಂಕ: 26.10.2005.

3) ಕ.ರಾ.ಹಿಂವಆಯೋಗದ ದಿನಾಂಕ: 4.10.2005 ರಂದು ನಡೆದ 13ನೇ ಸಭೆಯ ನಡಾವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: 1 ಮತ್ತು 2ರ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗದ ಪ್ರಸ್ತಾವನೆಯಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗವು ಕೈಗೊಳ್ಳಲಿರುವ ಸಾಮಾಜಿಕ ಶೈಕ್ಷಣಿಕ ಮತ್ತು ಆರ್ಥಿಕ ಮನೆ ಮನೆ ಸಮೀಕ್ಷೆ ಕಾರ್ಯಕ್ಕಾಗಿ ತಗಲುವ ಅಂದಾಜು ಬಾಬ್ತು ರೂ.25.50 ಕೋಟಿ ರೂಪಾಯಿಗಳ ವೆಚ್ಚಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 3 ರಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗವು ಸಮೀಕ್ಷೆಗೆ ಒಟ್ಟಾರೆ ರೂ.25.50 ಕೋಟಿ ರೂ.ಗಳ ವೆಚ್ಚ ತಯಾರಿಸಿದ್ದು ಆಯೋಗದ ದಿನಾಂಕ: 4.10.2005ರ 134ನೇ ಸಭೆಯಲ್ಲಿ ಈ ವೆಚ್ಚಕ್ಕೆ ಅನುಮೋದನೆಯನ್ನು ನೀಡಲಾಗಿರುತ್ತದೆ.

ಈ ಮೇರೆಗೆ ಆಯೋಗವು ರಾಜ್ಯದಲ್ಲಿ ಮನೆ ಮನೆ ಸಮೀಕ್ಷಾ ಕಾರ್ಯಕ್ಕಾಗಿ ಪೂರ್ವಭಾವಿ ಸಿದ್ಧತೆಗಳನ್ನು ಮಾಡಿಕೊಂಡು ಸಮೀಕ್ಷಾ ಕಾರ್ಯ ಕೈಗೊಳ್ಳುವುದಿದ್ದು ಈ ವೆಚ್ಚಗಳಿಗಾಗಿ ರೂ.25.50 ಕೋಟಿಗಳನ್ನು ರಾಜ್ಯವಲಯ ಯೋಜನೆಯಡಿ, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗಕ್ಕೆ ಸಾಮಾಜಿಕ ಶೈಕ್ಷಣಿಕ ಮತ್ತು ಆರ್ಥಿಕ ಮನೆ ಮನೆ ಸಮೀಕ್ಷೆಗಾಗಿ "2225-03-800-0-10" ರ ಲೆಕ್ಕ ಶೀರ್ಷಿಕೆಯಲ್ಲಿ ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತದೆ. ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 223 ಬಿಸಿಎ 2005, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2006**

ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗದ ಅಧಿನಿಯಮ 1995ರ ಸೆಕ್ಷನ್ 9ರ ಅನ್ವಯ ಹಿಂದುಳಿದ ವರ್ಗಗಳ ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತಿಯನ್ನು ಸಮೀಕ್ಷೆ ಮಾಡುವುದು ಆಯೋಗದ ಮೂಲ ಕರ್ತವ್ಯವಾಗಿರುತ್ತದೆ. ಆಯೋಗದ ಅಧಿನಿಯಮ ಸೆಕ್ಷನ್ 11ರ ಪ್ರಕಾರ ಕಾಲಕಾಲಕ್ಕೆ ಹಿಂದುಳಿದ ವರ್ಗಗಳ ಪಟ್ಟಿಯನ್ನು ರಾಜ್ಯ ಸರ್ಕಾರವು ಪುನರ್ ಅವಲೋಕನ ಮಾಡಬೇಕಿದ್ದು ಪ್ರತಿ 10 ವರ್ಷಗಳಿಗೊಮ್ಮೆ ಈ ರೀತಿ ಪುನರ್ ಸಮೀಕ್ಷೆ ಮಾಡಬೇಕಾಗಿರುವುದನ್ನು ಮನಗಂಡು, ಆಯೋಗವು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗವು ಕೈಗೊಳ್ಳುವ ಸಾಮಾಜಿಕ ಶೈಕ್ಷಣಿಕ ಮತ್ತು ಆರ್ಥಿಕ ಮನೆ ಮನೆ ಸಮೀಕ್ಷಾ ಕಾರ್ಯ ನಿರ್ವಹಿಸಲು ರೂ.25.50 ಕೋಟಿ ರೂಪಾಯಿಗಳು ಅಂದಾಜು ಮೊತ್ತವನ್ನು ರಾಜ್ಯವಲಯ ಯೋಜನೆಯಡಿ, ಆಯೋಗದ ಸಾಮಾಜಿಕ ಶೈಕ್ಷಣಿಕ ಮತ್ತು ಆರ್ಥಿಕ ಮನೆ ಮನೆ ಸಮೀಕ್ಷೆಗಾಗಿ, "2225-03-800-0-10" ರ ಲೆಕ್ಕ ಶೀರ್ಷಿಕೆಯಲ್ಲಿ ಭರಿಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

ಈ ಆದೇಶವನ್ನು ದಿನಾಂಕ: 29.05.2006 ಸಂಖ್ಯೆ: ಎಫ್‌ಡಿ 17:ವೆಚ್ಚ-3:06 ರಂದು ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಮಸ್ವಾಮಿ**

ಪಿ.ಆರ್. 1351 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಸಮಾಜ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕು ಮಾದಿನೂರು ಗ್ರಾಮದ ಶ್ರೀ ವಿಷ್ಣುತೀರ್ಥ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ:** ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ/ಸಿಆರ್/24/2004-05, ದಿನಾಂಕ: 16.03.2005 ಮತ್ತು 15.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರ ದಿನಾಂಕ: 16.03.2005 ರಲ್ಲಿ ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕು, ಮಾದಿನೂರು ಗ್ರಾಮದ ಶ್ರೀ ವಿಷ್ಣುತೀರ್ಥ ದೇವಸ್ಥಾನವನ್ನು ಅಧಿಸೂಚಿತ ಪಟ್ಟಿಯಿಂದ ಕೈಬಿಡಲು ಜಿಲ್ಲಾಧಿಕಾರಿಗಳು, ಧಾರ್ಮಿಕ ದತ್ತಿ ಆಯುಕ್ತರು ಪ್ರಸ್ತಾಪಿಸಿದ್ದಾರೆ.

ಶ್ರೀ ವಿಷ್ಣುತೀರ್ಥ ದೇವಸ್ಥಾನವು ಒಂದು ಮಠವಾಗಿರುವುದರಿಂದ ದತ್ತಿಗಳ ಅಧಿನಿಯಮ 1997ರ ಉಪಬಂಧ 1(4)(i) ರಂತೆ ಅಧಿನಿಯಮದ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಲು ಜಿಲ್ಲಾಧಿಕಾರಿಗಳು, ಧಾರ್ಮಿಕ ದತ್ತಿ ಆಯುಕ್ತರು ಶಿಫಾರಸ್ಸು ಮಾಡಿದ್ದಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 37 ಮುಆಬಿ 2005, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2006**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪ ನಿಯಮ 4(i)ರ ಪ್ರಕಾರ "ಒಂದು ಮಠಕ್ಕೆ ಅದಕ್ಕೆ ಸೇರಿದ ಒಂದು ದೇವಸ್ಥಾನಕ್ಕೆ ಅನ್ವಯಿಸತಕ್ಕದ್ದಲ್ಲ" ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77

ಮುಸೇವಿ 2003, ದಿನಾಂಕ: 30.04.2003 ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು, ಮಾದಿನೂರು ಗ್ರಾಮದ ಶ್ರೀ ವಿಷ್ಣುತೀರ್ಥ ದೇವಸ್ಥಾನ ಕ್ರಮ ಸಂಖ್ಯೆ: 143 ಪುಟ ಸಂಖ್ಯೆ: 537ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎನ್. ಪ್ರಸಾದ್**

ಪಿ.ಆರ್. 1362 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

## ಒಳಾಡಳಿತ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಒಇ 300 ಪಿಪಿಇ 2006, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್ 2006**

ಸಮಸಂಖ್ಯೆಯ ದಿನಾಂಕ: 25.7.2006ರ ಆದೇಶದ ಆದೇಶ ಭಾಗದಲ್ಲಿ, "ಸರ್ಕಾರಿ ಅಭಿಯೋಜಕರು, ಮಂಡ್ಯ" ಎಂಬುದರ ಬದಲಾಗಿ "ಸರ್ಕಾರಿ ಅಭಿಯೋಜಕರು, ಶಿವಮೊಗ್ಗ (ಹಿಂದಿನ ಸರ್ಕಾರಿ ಅಭಿಯೋಜಕರು ಮಂಡ್ಯ)" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು, ಹಾಗೆಯೆ ಪ್ರತಿ ಗುರುತಿಸುವಲ್ಲಿ ಕ್ರಮ ಸಂಖ್ಯೆ 3 ರಲ್ಲಿ ನಮೂದಿಸಿರುವ "ಎಫ್.ಹೆಚ್.ಹಾವರ್ಗಿ, ಅಭಿಯೋಗ ಉಪ ನಿರ್ದೇಶಕರು, ಮಂಗಳೂರು" ಎಂಬುದರ ಬದಲಾಗಿ "ಶ್ರೀ ಸಿ.ಶಂಕರೇಗೌಡ, ಸರ್ಕಾರಿ ಅಭಿಯೋಜಕರು, ಶಿವಮೊಗ್ಗ (ಹಿಂದಿನ ಸರ್ಕಾರಿ ಅಭಿಯೋಜಕರು ಮಂಡ್ಯ)" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಇದರ ಹೊರತಾಗಿ ಸದರಿ ಆದೇಶದಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1364 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಕಾಫಿಪೋಸ ಮತ್ತು ಅಭಿಯೋಗ).

**ತಿದ್ದುಪಡಿ ಸಂಖ್ಯೆ: ಒಇ 358 ಪಿಪಿಇ 2006, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2006**

ದಿನಾಂಕ: 25.5.2006ರ ಸಮಸಂಖ್ಯೆಯ ಅಧಿಸೂಚನೆಯಲ್ಲಿನ ತಃಖ್ತೆಯ ಕ್ರಮ ಸಂಖ್ಯೆ (15)ರ ಅಂಕಣ (5) ರಲ್ಲಿ ನಮೂದಿಸಿರುವ 'ಸಹಾಯಕ ಸರ್ಕಾರಿ ಅಭಿಯೋಜಕರು, ಚಿಕ್ಕಬಳ್ಳಾಪುರ' ಎಂಬುದರ ಬದಲಾಗಿ 'ಸಹಾಯಕ ಸರ್ಕಾರಿ ಅಭಿಯೋಜಕರು, ಗೌರೀಬಿದನೂರು' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಇದರ ಹೊರತಾಗಿ ಸದರಿ ಅಧಿಸೂಚನೆಯಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1365 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಕಾಫಿಪೋಸ ಮತ್ತು ಅಭಿಯೋಗ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಬಿ.ಎಂ. ಶಿವಪ್ರಕಾಶ್, ಐ.ಎ.ಎಸ್. ಸರ್ಕಾರದ ಸಹ ಕಾರ್ಯದರ್ಶಿ, ಸಿಆಸುಇ (ಜನಸ್ಪಂದನ) ಇವರಿಗೆ ರಜೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಅ.ಸ.ಪತ್ರ ಸಂಖ್ಯೆ: ಡಿಪಿಎಆರ್/ಪಿಎಸ್/ಜೆಎಸ್/24/2006, ದಿನಾಂಕ: 31.1.2006.
2) ಅ.ಸ.ಪತ್ರ ಸಂಖ್ಯೆ: ಡಿಪಿಎಆರ್/ಪಿಎಸ್/ಜೆಎಸ್/24/2006, ದಿನಾಂಕ: 8.2.2006 ಮತ್ತು 10.2.2006.
3) ಅ.ಸ.ಪತ್ರ ಸಂಖ್ಯೆ: ಡಿಪಿಎಆರ್/ಪಿಎಸ್/ಜೆಎಸ್/69/2006, ದಿನಾಂಕ: 16.03.2006.
4) ಅ.ಸ.ಪತ್ರ ಸಂಖ್ಯೆ: ಡಿಪಿಎಆರ್/ಪಿಎಸ್/ಜೆಎಸ್/147/2006, ದಿನಾಂಕ: 26.05.2006.
5) ಶ್ರೀ ಬಿ.ಎಂ.ಶಿವಪ್ರಕಾಶ್, ಐ.ಎ.ಎಸ್. ಸರ್ಕಾರದ ಸಹ ಕಾರ್ಯದರ್ಶಿ ರವರ ಮನವಿ ದಿನಾಂಕ: 14.2.2006 ಮತ್ತು
6) ಅ.ಸ.ಪತ್ರ ಸಂಖ್ಯೆ: ಡಿಪಿಎಆರ್/18/ಜೆಎಸ್/ಜೆಎಸ್ಪಿ/2006, ದಿನಾಂಕ: 29.03.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ-1 ರಿಂದ 4ರ ವರೆಗಿನ ಉಲ್ಲೇಖಿತ ಅ.ಸ.ಪತ್ರಗಳಲ್ಲಿ ಶ್ರೀ ಬಿ.ಎಂ.ಶಿವಪ್ರಕಾಶ್, ಐ.ಎ.ಎಸ್. ಸರ್ಕಾರದ ಸಹ ಕಾರ್ಯದರ್ಶಿ, ಸಿಆಸುಇ (ಜನಸ್ಪಂದನ ಕೋಶ), ಬೆಂಗಳೂರು ರವರು ಪ್ರತಿ ಮಾಹೆಯ ಅನೇಕ ದಿನಗಳಂದು ರಜೆ ಮಂಜೂರಾತಿಗೆ ಪೂರ್ವಾನುಮತಿಯನ್ನು ಪಡೆಯದೆ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆಂದು ತಿಳಿಸುತ್ತಾ, ವೇತನ ರಹಿತ ರಜೆಯೆಂದು ಪರಿಗಣಿಸಲು (ಪ್ರಧಾನ ಕಾರ್ಯದರ್ಶಿ, ಸಿಆಸುಇ (ಜನಸ್ಪಂದನ) ಇವರು ವರದಿ ಮಾಡಿದ್ದಾರೆ.

ಮೇಲೆ ಓದಲಾದ ಕ್ರಮಾಂಕ 5 ಮತ್ತು 6ರ ಉಲ್ಲೇಖಿತ ಅ.ಸ.ಪತ್ರದಲ್ಲಿ ಶ್ರೀ ಬಿ.ಎಂ.ಶಿವಪ್ರಕಾಶ್, ಐ.ಎ.ಎಸ್. ರವರು ಗೈರುಹಾಜರಾತಿಗೆ ಸ್ಪಷ್ಟೀಕರಣವನ್ನು ಸಲ್ಲಿಸುತ್ತಾ ಅಧಿಕೃತವಾಗಿ ರಜೆ ಮಂಜೂರಾತಿಗೆ ಅರ್ಜಿಗಳನ್ನು ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಗೈರುಹಾಜರಾಗಿರುವ ದಿನಾಂಕಗಳಿಗೆ ಅವರು ಈಗಾಗಲೇ ಅರ್ಜಿ ಸಲ್ಲಿಸಿರುವುದರಿಂದ ಗೈರುಹಾಜರಾತಿ ಅವಧಿಯನ್ನು ಗಳಿಕೆ ರಜೆಯೆಂದು ಪರಿಗಣಿಸಲು ವಿನಂತಿಸಿಕೊಂಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಸೇಪೋಸೆ 2006, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2006**

ಶ್ರೀ ಬಿ.ಎಂ. ಶಿವಪ್ರಕಾಶ್, ಐ.ಎ.ಎಸ್. ಸರ್ಕಾರದ ಸಹ ಕಾರ್ಯದರ್ಶಿ, ಸಿಆಸುಇ (ಜನಸ್ಪಂದನ ಕೋಶ), ಬೆಂಗಳೂರು ರವರಿಗೆ ಈ ಕೆಳಕಂಡಂತೆ ಒಟ್ಟು 19 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

1) ದಿನಾಂಕ: 24.1.2006 ಮತ್ತು 25.1.2006 02 ದಿನಗಳು
2) ದಿನಾಂಕ: 28.1.2006 ರಿಂದ 8.2.2006 12 ದಿನಗಳು

3) ದಿನಾಂಕ: 14.3.2006 ರಿಂದ 16.3.2006ರ ವರೆಗೆ 03 ದಿನಗಳು

4) ದಿನಾಂಕ: 22.3.2006 ರಿಂದ 23.3.2006ರ ವರೆಗೆ 2 ದಿನಗಳ ಗಳಿಕೆ ರಜೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1373 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1).

**ವಿಷಯ:** ಸರ್ಕಾರಿ ಅಧಿಕೃತ ಕೆಲಸಗಳಿಗಾಗಿ ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಪಡೆಯುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 278 ಶಿವಾನೀ 2000, ದಿನಾಂಕ: 18.03.2002.

2) ಪತ್ರ ಸಂಖ್ಯೆ: ಸಾಆ/ರಾಸಾಪ್ರಾ-1ಬಿ:ವೈವ-158/2005-06, ದಿನಾಂಕ: 23.06.2006.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅಧಿಕೃತ ಕೆಲಸ ಕಾರ್ಯಗಳಿಗೆ ಖಾಸಗಿ ವಾಹನಗಳನ್ನು ಪಡೆದು ನೀಡುವ ಬಾಡಿಗೆ ದರ ಹಾಗೂ ಕಾಲಮಿತಿಯನ್ನು ಈ ಕೆಳಕಂಡ ಗರಿಷ್ಟ ಮಿತಿಗೊಳಪಡಿಸಿ ನಿಗದಿಪಡಿಸಲಾಗಿರುತ್ತದೆ.

| | |
|---|---|
| ಅ) ಮಾಸಿಕ 2500 ಕಿ.ಮೀ. ಅಥವಾ 300 ಗಂಟೆಗಳು | ರೂ.15,000 |
| ಆ) 2500 ಕಿ.ಮೀ. ನಂತರ ಪ್ರತಿ ಕಿ.ಮೀ.ಗೆ | ರೂ.3.00 (ವಿಶೇಷ ಸಂದರ್ಭಗಳಲ್ಲಿ ಮಾತ್ರ) |
| ಇ) 300 ಗಂಟೆಗಳ ನಂತರ ಪ್ರತಿ ಗಂಟೆಗೆ | ರೂ.25.00 (ವಿಶೇಷ ಸಂದರ್ಭಗಳಲ್ಲಿ ಮಾತ್ರ) |

ಈ ಮೇಲಿನ ದರಗಳನ್ನು ಪರಿಷ್ಕರಿಸಲು ಸರ್ಕಾರ / ಖಾಸಗಿ ಸಂಸ್ಥೆಗಳಿಂದ ಮನವಿಗಳು ಸ್ವೀಕೃತವಾದುವು. ಪ್ರಸ್ತುತ ಇಂಧನ ಹಾಗೂ ಯಂತ್ರೋಪಕರಣಗಳ ಬೆಲೆಯ ಏರಿಕೆಯ ಹಿನ್ನೆಲೆಯಲ್ಲಿ ಕೋರಿಕೆಯನ್ನು ಪರಿಶೀಲಿಸಿ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸಾರಿಗೆ ಆಯುಕ್ತರನ್ನು ಕೋರಲಾಯಿತು. ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸಾರಿಗೆ ಆಯುಕ್ತರ ಪತ್ರದಲ್ಲಿ ಪ್ರಸ್ತುತ ಜಾರಿಯಲ್ಲಿರುವ ಬಾಡಿಗೆ ದರಗಳನ್ನು ಪರಿಷ್ಕರಿಸಲು ಶಿಫಾರಸ್ಸು ಮಾಡಿರುವರು. ಸರ್ಕಾರವು ಸದರಿ ಶಿಫಾರಸ್ಸುಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 139 ಶಿವಾನೀ 2004, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರದ ಅಧಿಕೃತ ಕೆಲಸ ಕಾರ್ಯಗಳಿಗಾಗಿ ಖಾಸಗಿ ವಾಹನಗಳನ್ನು ಬಾಡಿಗೆಗೆ ಪಡೆಯಲು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 278 ಶಿವಾನೀ 2000, ದಿನಾಂಕ: 18.03.2002 ರಲ್ಲಿ ನಮೂದಿಸಿದ್ದ ಬಾಡಿಗೆ ದರಗಳನ್ನು ಹಾಗೂ ಕಾಲಮಿತಿಯನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಕೂಡಲೇ ಜಾರಿಗೆ ಬರುವಂತೆ ಆದೇಶಿಸಿದೆ.

| | |
|---|---|
| ಅ) ಮಾಸಿಕ 2500 ಕಿ.ಮೀ. ಅಥವಾ 300 ಗಂಟೆಗಳು | ರೂ.20,000 |
| ಆ) 2500 ಕಿ.ಮೀ. ನಂತರ ಪ್ರತಿ ಕಿ.ಮೀ.ಗೆ | ರೂ.4.00 (ವಿಶೇಷ ಸಂದರ್ಭಗಳಲ್ಲಿ ಮಾತ್ರ) |
| ಇ) 300 ಗಂಟೆಗಳ ನಂತರ ಪ್ರತಿ ಗಂಟೆಗೆ | ರೂ.30.00 (ವಿಶೇಷ ಸಂದರ್ಭಗಳಲ್ಲಿ ಮಾತ್ರ) |

ಉಳಿದಂತೆ ವಾಹನ ನೀತಿಗೆ ಸಂಬಂಧಿಸಿದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಹಾಗೂ ಆರ್ಥಿಕ ಇಲಾಖೆಯು ಕಾಲಕಾಲಕ್ಕೆ ಹೊರಡಿಸುವ ಎಲ್ಲಾ ಸೂಚನೆಗಳನ್ನು ಹಾಗೂ ಈ ಕೆಳಕಂಡ ಷರತ್ತುಗಳನ್ನು ಪಾಲಿಸತಕ್ಕದ್ದು.

1. ವಾಹನಗಳನ್ನು ಬಾಡಿಗೆಗೆ ಪಡೆಯುವ ಮುನ್ನ ಸಂಬಂಧಪಟ್ಟ ಟ್ರಾವೆಲ್ ಏಜೆನ್ಸಿ ಹಾಗೂ ಬಾಡಿಗೆ ಪಡೆಯುವ ವಾಹನಗಳ ಬಗ್ಗೆ ಮತ್ತು ದಾಖಲೆಗಳ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಸೂಕ್ತ ಖಾತ್ರಿ ಪಡೆದುಕೊಳ್ಳತಕ್ಕದ್ದು.
2. ವಾಹನಗಳನ್ನು ಬಾಡಿಗೆಗೆ ಪಡೆಯುವ ಮುನ್ನ ನಿಯಮಾವಳಿಗಳನ್ವಯ ದರಪಟ್ಟಿಗಳನ್ನು ಪಡೆಯತಕ್ಕದ್ದು ಹಾಗೂ ಈ ಬಗ್ಗೆ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸುವ ಆದೇಶಗಳನ್ನು ಕಟ್ಟು ನಿಟ್ಟಾಗಿ ಪಾಲಿಸತಕ್ಕದ್ದು.
3. ವಾಹನಗಳನ್ನು ರಾಜ್ಯ ಸರ್ಕಾರದ ಎಲ್ಲಾ ಸಾರ್ವಜನಿಕ / ಸ್ವಾಯತ್ತ ಸಂಸ್ಥೆ / ಸ್ಥಳೀಯ ಸಂಸ್ಥೆಗಳು / ನಿಗಮ ಹಾಗೂ ಮಂಡಳಿ ಇತ್ಯಾದಿಗಳಿಗೂ ಸಹ ವಿಸ್ತರಿಸಲಾಗಿದೆ. ಸರ್ಕಾರದ ಕಾರ್ಯದರ್ಶಿಗಳು ತಮ್ಮ ಅಧೀನದಲ್ಲಿ ಬರುವ ಎಲ್ಲಾ ನಿಗಮ ಮಂಡಳಿಗಳು ಇತ್ಯಾದಿಗಳಿಗೆ ಈ ಬಗ್ಗೆ ಸೂಚನೆಗಳನ್ನು ನೀಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1250 ವೆಚ್ಚ-5/2006, ದಿನಾಂಕ: 18.08.2006 ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ತಿಪ್ಪೇಸ್ವಾಮಿ**

ಪಿ.ಆರ್. 1374 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

## ಕಂದಾಯ ಸಚಿವಾಲಯ

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉಪ ನೋಂದಣಿ ಕಛೇರಿಗಳ ಕಟ್ಟಡ ಕಟ್ಟಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ-4/05-06, ದಿನಾಂಕ: 05.04.2006.

2) ಸರ್ಕಾರಿ ಆದೇಶ ಸಂಖ್ಯೆ: ಕಂಇ 1 ಮುನೋಸ 2006, ದಿನಾಂಕ: 25.04.2006.

3) ಸರ್ಕಾರಿ ಆದೇಶ ಸಂಖ್ಯೆ: ಕಂಇ 88 ಮುನೋಮು 2006, ದಿನಾಂಕ: 29.03.2006.

4) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ-04/05-02, ದಿನಾಂಕ: 16.06.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ದಿನಾಂಕ: 05.04.2006ರ ಪತ್ರದಲ್ಲಿ ಉಪ ನೋಂದಣಿ ಕಛೇರಿ ಕಟ್ಟಡಗಳನ್ನು ಕಟ್ಟುವ ಕುರಿತು 2006-07ನೇ ಸಾಲಿನಲ್ಲಿ ನೀಡಲಾಗಿರುವ ರೂ.200 ಲಕ್ಷಗಳನ್ನು ವಿನಿಯೋಗಿಸಲು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (2) ರಲ್ಲಿ ತುಮಕೂರು ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ ರೂ.64,77,970/- ಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (3) ರಲ್ಲಿ ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ ರೂ.10,40,000/- ಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಮೇಲೆ (4) ರಲ್ಲಿ ಓದಲಾದ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರ ದಿನಾಂಕ: 16.06.2006ರ ಪತ್ರದಲ್ಲಿ 2006-07ನೇ ಸಾಲಿನ ಆಯವ್ಯಯದಲ್ಲಿ ಉಪ ನೋಂದಣಿ ಕಛೇರಿಗಳನ್ನು ಕಟ್ಟುವ ಸಲುವಾಗಿ ರೂ.2 ಕೋಟಿ ಅನುದಾನ ಮಂಜೂರಾಗಿದ್ದು, ಇದರಲ್ಲಿ ತುಮಕೂರು ಉಪ ನೋಂದಣಿ ಕಛೇರಿ ಕಟ್ಟಡಕ್ಕಾಗಿ ರೂ.64,77,970/- ಗಳಿಗೆ ಹಾಗೂ ಸದಲಗಾ ಉಪ ನೋಂದಣಿ ಕಛೇರಿ ಕಟ್ಟಡ ವೆಚ್ಚಕ್ಕಾಗಿ ರೂ.10,40,000/- ಗಳಿಗೆ ಸರ್ಕಾರದಿಂದ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ. ಎರಡು ಕಛೇರಿಗಳ ಕಟ್ಟಡ ನಿರ್ಮಾಣಕ್ಕಾಗಿ ಒಟ್ಟು ರೂ.75,18,000/- ಗಳಿಗೆ ಸರ್ಕಾರದಿಂದ ಆಡಳಿತಾತ್ಮಕ ಮಂಜೂರಾತಿ ನೀಡಿದ್ದು, ಇನ್ನುಳಿದ ರೂ.1,24,82,000/- ಗಳನ್ನು ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ ಬಳಸಲು ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 37 ಮುನೋಸ 2006, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಜಿಲ್ಲಾ ಮತ್ತು ಉಪ ನೋಂದಣಿ ಕಛೇರಿಗಳ ಕಟ್ಟಡ ನಿರ್ಮಾಣಕ್ಕಾಗಿ ಲೆಕ್ಕ ಶೀರ್ಷಿಕೆ 4059-80-051-0-30-386 ಅಡಿಯಲ್ಲಿ ರೂ.200 ಲಕ್ಷಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಈಗಾಗಲೇ ತುಮಕೂರು ಮತ್ತು ಸದಲಗಾ ಉಪ ನೋಂದಣಿ ಕಛೇರಿಗಳ ಕಟ್ಟಡ ನಿರ್ಮಾಣಕ್ಕಾಗಿ ರೂ.75,18,000/- ಗಳನ್ನು ಬಿಡುಗಡೆ ಮಾಡಲಾಗಿದ್ದು, ಇನ್ನುಳಿದ ರೂ.1,24,82,000/- ಗಳಲ್ಲಿ ಈ ಕೆಳಗಿನ ಉಪ ನೋಂದಣಿ ಕಛೇರಿಗಳ ಕಟ್ಟಡ ನಿರ್ಮಾಣಕ್ಕಾಗಿ ಉಪಯೋಗಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶಿಸಿದೆ. ಹಾಗೂ ಕರ್ನಾಟಕ ಗೃಹ ಮಂಡಳಿ ಮುಖಾಂತರ ಸದರಿ ಕಟ್ಟಡಗಳ ನಿರ್ಮಾಣ ಕಾರ್ಯವನ್ನು ಕೈಗೊಳ್ಳಲು ಸೂಚಿಸಲಾಗಿದೆ.

| ಕ್ರ.ಸಂ. | ಉಪ/ಜಿಲ್ಲಾ ನೋಂದಣಿ ಕಛೇರಿ ಹೆಸರು | ಜಿಲ್ಲೆ | ಅಂದಾಜು ವೆಚ್ಚ ಲಕ್ಷ ರೂ.ಗಳಲ್ಲಿ |
|---|---|---|---|
| 1 | ಚಿತ್ರದುರ್ಗ | ಚಿತ್ರದುರ್ಗ | 15.10 |
| 2 | ಹಾಸನ (ಜಿ.ನೋ.ಕ.) | ಹಾಸನ | 20.00 |
| 3 | ಬಾಣಾವರ | ಹಾಸನ | 15.00 |
| 4 | ಕುಣಿಗಲ್ | ತುಮಕೂರು | 20.00 |
| 5 | ಕುರಗೋಡ | ಬಳ್ಳಾರಿ | 14.72 |
| 6 | ಮಂಗಳೂರು ನಗರ ಮತ್ತು ಮಂಗಳೂರು ತಾಲ್ಲೂಕು ಕಛೇರಿಗಳಿಗಾಗಿ | ಮಂಗಳೂರು | 40.00 |
| | **ಒಟ್ಟು** | | **1,24,82,000** |

(2) ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರನ್ವಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ಪುರುಷೋತ್ತಮ**

ಪಿ.ಆರ್. 1380 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ:** ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳ ನಿಯಮಿತ, ಬೆಂಗಳೂರು ಇದರ ಶಾಸನಬದ್ಧ ಲೆಕ್ಕ ಪರಿಶೋಧನೆ ನಡೆಸುವ ಬಗ್ಗೆ.

**ಓದಲಾಗಿದೆ:** 1) ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳ ನಿ., ಇದರ ಅಧ್ಯಕ್ಷರ ಪತ್ರದ ಸಂಖ್ಯೆ: ಎಫ್‌ಡಿ/ಎಸಿಸಿಟಿಎಸ್, ದಿನಾಂಕ: 27.08.2004.

2) ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳ ನಿಯಮಿತ, ಇದರ ವ್ಯವಸ್ಥಾಪಕ ನಿರ್ದೇಶಕರ ಪತ್ರದ ಸಂಖ್ಯೆ: ಕಹಾಮ/ವಿತ್ತ/2575/2004/250 ದಿನಾಂಕ: 16.09.2004.

3) ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳ ನಿಯಮಿತ, ಇದರ ವ್ಯವಸ್ಥಾಪಕ ನಿರ್ದೇಶಕರ ಪತ್ರದ ಸಂಖ್ಯೆ: 471/ಆಡಳಿತ-2/2006, ದಿನಾಂಕ: 16.08.2006.

**ಪ್ರಸ್ತಾವನೆ:**

ಮೇಲೆ ಓದಲಾದ (01) ಮತ್ತು (02)ರ ಪತ್ರಗಳಲ್ಲಿ ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳಿಯು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರಡಿ ನೋಂದಾಯಿತಗೊಂಡಿದ್ದು, ಕರ್ನಾಟಕ ರಾಜ್ಯಾದ್ಯಂತ ತನ್ನದೇ ಆದ ಹತ್ತು ಘಟಕಗಳ ಸಹಿತ ಹದಿಮೂರು ಸದಸ್ಯ

ಹಾಲು ಒಕ್ಕೂಟಗಳೊಂದಿಗೆ ಕಾರ್ಯನಿರ್ವಹಿಸುತ್ತಿದ್ದು ದಿನಾಂಕ: 28.02.2000 ರಂದು ಕರ್ನಾಟಕ ಸರ್ಕಾರ ಮತ್ತು ರಾಷ್ಟ್ರೀಯ ಹೈನು ಅಭಿವೃದ್ಧಿ ಮಂಡಳಿ ನಡುವೆ ಆದ ಒಡಂಬಡಿಕೆಯನ್ವಯ ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳಿ ಮತ್ತು ಹಾಲು ಒಕ್ಕೂಟಗಳ ಶಾಸನಬದ್ಧ ಲೆಕ್ಕಪರಿಶೋಧನಾ ಕಾರ್ಯವನ್ನು ಚಾರ್ಟರ್ಡ್ ಅಕೌಂಟೆಂಟರಿಂದ ನಿರ್ವಹಿಸಬಹುದಾಗಿರುತ್ತದೆ ಎಂಬುದಕ್ಕೆ ಒಪ್ಪಿಗೆ ನೀಡಿದ್ದು ಈ ಒಡಂಬಡಿಕೆಯನ್ವಯ ಕರ್ನಾಟಕ ಸಹಕಾರಿ ಹಾಲು ಉತ್ಪಾದಕ ಮಹಾಮಂಡಳದ ದೂರಗಾಮಿ ಯೋಜನೆ 2004 ರಡಿಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ ರಾಷ್ಟ್ರೀಯ ಹೈನು ಅಭಿವೃದ್ಧಿ ಮಂಡಳಿಯಿಂದ ರೂ.250.00 ಕೋಟಿಗಳ ಆರ್ಥಿಕ ನೆರವನ್ನು ನೀಡಲು ಸಹ ಸಮ್ಮತಿಸಲಾಗಿದೆ ಎಂದು ತಿಳಿಸಿ ಕರ್ನಾಟಕ ಸಹಕಾರಿ ಹಾಲು ಉತ್ಪಾದಕ ಮಹಾಮಂಡಳಿ ನಿಯಮಿತ ಮತ್ತು ಸದಸ್ಯ ಹಾಲು ಒಕ್ಕೂಟಗಳಿಗೆ ಸಹಕಾರ ಸಂಘಗಳ ಲೆಕ್ಕ ಪರಿಶೋಧನೆ ಇಲಾಖೆಯ, ಲೆಕ್ಕಪರಿಶೋಧನಾ ವ್ಯಾಪ್ತಿಯಿಂದ ವಿನಾಯಿತಿ ನೀಡಿ ಚಾರ್ಟರ್ಡ್ ಅಕೌಂಟೆಂಟರಿಂದ ಲೆಕ್ಕಪರಿಶೋಧನಾ ಕಾರ್ಯವನ್ನು ಕೈಗೊಳ್ಳಲು ಸರ್ಕಾರದ ಅನುಮತಿ ನೀಡಬೇಕೆಂದು ಕೋರಲಾಗಿರುತ್ತದೆ. ಮೇಲೆ ಓದಲಾದ (03) ರ ಪತ್ರದಲ್ಲಿ ಮಹಾಮಂಡಳಿಯು ಪ್ರಗತಿಪರವಾಗಿ ಮುನ್ನಡೆದು ಗ್ರಾಮೀಣ ಹಾಲು ಉತ್ಪಾದಕರುಗಳ ಹಿತಾಸಕ್ತಿಯನ್ನು ಕಾಯ್ದುಕೊಳ್ಳುವ ನಿಟ್ಟಿನಲ್ಲಿ ಸಹಕಾರ ಲೆಕ್ಕಪರಿಶೋಧನಾ ವ್ಯಾಪ್ತಿಯಿಂದ ಹೊರಬರುವುದು ಅಗತ್ಯವಾಗಿರುತ್ತದೆ ಎಂದು ತಿಳಿಸಿ ಮಹಾಮಂಡಳದ ವಾರ್ಷಿಕ ಲೆಕ್ಕಪತ್ರಗಳ ಪರಿಶೋಧನೆಯನ್ನು ಚಾರ್ಟರ್ಡ್ ಅಕೌಂಟೆಂಟ್ ಸಂಸ್ಥೆಗಳ ಮೂಲಕ (ಇನ್ಸ್‌ಸ್ಟಿಟ್ಯೂಟ್ ಆಫ್ ಚಾರ್ಟರ್ಡ್ ಅಕೌಂಟೆಂಟ್ ಸಂಸ್ಥೆಯವರಿಂದ ಅಂಗೀಕೃತವಾದ ಚಾರ್ಟರ್ಡ್ ಅಕೌಂಟೆಂಟ್ ಸಂಸ್ಥೆ) ಕೈಗೊಳ್ಳಲು ಅನುಮತಿ ನೀಡಬೇಕೆಂದು ಮಹಾಮಂಡಳದ ವ್ಯವಸ್ಥಾಪಕ ನಿರ್ದೇಶಕರು ಕೋರಿರುತ್ತಾರೆ.

ಮೇಲಿನ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 171 ಸಿಎಲ್‌ಎಂ 2006, ಬೆಂಗಳೂರು, ದಿನಾಂಕ: 30ನೇ ಆಗಸ್ಟ್ 2006**

ಮೇಲೆ ಪ್ರಸ್ತಾವೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ: 28.02.2000 ದಂದು ಕರ್ನಾಟಕ ರಾಜ್ಯ ಸರ್ಕಾರ ಮತ್ತು ರಾಷ್ಟ್ರೀಯ ಹೈನು ಅಭಿವೃದ್ಧಿ ಮಂಡಳಿ ನಡುವೆ ಆದ ಒಡಂಬಡಿಕೆ ಅನ್ವಯ ಕರ್ನಾಟಕ ಸಹಕಾರ ಹಾಲು ಉತ್ಪಾದಕರ ಮಹಾಮಂಡಳಿ ನಿಯಮಿತ, ಬೆಂಗಳೂರು ಇದರ ಶಾಸನಬದ್ಧ ಲೆಕ್ಕಪರಿಶೋಧನೆಯನ್ನು 2006-2007ನೇ ಸಾಲಿನಿಂದ ಜಾರಿಗೆ ಬರುವಂತೆ ಭಾರತೀಯ ಚಾರ್ಟರ್ಡ್ ಅಕೌಂಟೆಂಟರ ಸಂಸ್ಥೆಯಿಂದ ಅಂಗೀಕೃತವಾದ ಚಾರ್ಟರ್ಡ್ ಅಕೌಂಟೆಂಟರುಗಳ ಮೂಲಕ ಮಾಡಿಸಲು ಕೆಳಕಂಡ ಷರತ್ತಿಗೊಳಪಟ್ಟು ಅನುಮತಿ ನೀಡಲಾಗಿದೆ.

1. ಭಾರತೀಯ ಚಾರ್ಟರ್ಡ್ ಅಕೌಂಟೆಂಟರ ಸಂಸ್ಥೆಯಿಂದ ಅಂಗೀಕೃತವಾದ ಚಾರ್ಟರ್ಡ್ ಅಕೌಂಟೆಂಟರುಗಳ ಪಟ್ಟಿಯನ್ನು ಪಡೆದು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 63(1) ರಡಿ ಲೆಕ್ಕಪರಿಶೋಧಕರೆಂದು ನೇಮಿಸತಕ್ಕದ್ದು.
2. ಚಾರ್ಟರ್ಡ್ ಅಕೌಂಟೆಂಟರುಗಳ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಮತ್ತು ನಿಯಮಗಳು 1960ರ ಪ್ರಕಾರ ಲೆಕ್ಕಪರಿಶೋಧನೆಯನ್ನು ನಿರ್ವಹಿಸತಕ್ಕದ್ದು.
3. ಸದರಿ ಚಾರ್ಟರ್ಡ್ ಅಕೌಂಟೆಂಟರುಗಳು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣಗಳಡಿ ಕೆಲಸ ನಿರ್ವಹಿಸತಕ್ಕದ್ದು.
4. ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಳಿಯು ಲೆಕ್ಕಪರಿಶೋಧನಾ ಶುಲ್ಕ / ಸಂಭಾವನೆಯನ್ನು ನೇರವಾಗಿ ಚಾರ್ಟರ್ಡ್ ಅಕೌಂಟೆಂಟರಿಗೆ ಪಾವತಿಸತಕ್ಕದ್ದು.
5. ಕರ್ನಾಟಕ ಸಹಕಾರ ಹಾಲು ಉತ್ಪಾದಕರ ಮಹಾಮಂಡಳಿಯು ಪ್ರತಿ ವರ್ಷ ಸರ್ಕಾರಕ್ಕೆ ಸೇವಾ ಶುಲ್ಕದ ರೂಪದಲ್ಲಿ ರೂ.10,000-00 ಗಳನ್ನು ಲೆಕ್ಕಶೀರ್ಷಿಕೆ:ಸಹಕಾರ ಸಂಘಗಳ ಲೆಕ್ಕಪರಿಶೋಧನೆ ಇಲಾಖೆಯ ಇತರೆ ಜಮೆ (other receipts) ಉಪಲೆಕ್ಕಶೀರ್ಷಿಕೆಯಡಿ ಜಮಾ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1384

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆ, ಖಾನಾಪುರ ತಾಲ್ಲೂಕು, ಮನಸಾಪುರ ಗ್ರಾಮದ ಸರ್ವೆ ನಂ.124ರ ವಿಸ್ತೀರ್ಣದಲ್ಲಿ 180 ಎಕರೆ ಜಮೀನನ್ನು ಪೊಲೀಸ್ ತರಬೇತಿ ಶಾಲೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿ, ಬೆಳಗಾವಿ ಜಿಲ್ಲೆ, ಬೆಳಗಾವಿ ಇವರ ಪತ್ರ ಸಂಖ್ಯೆ: ಕಂಶಾ/ಭೂಸು/ವಿವ/32/2000-2001, ದಿನಾಂಕ: 12.7.2004 ಮತ್ತು 8.3.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಬೆಳಗಾವಿ ಜಿಲ್ಲೆ, ಖಾನಾಪುರ ತಾಲ್ಲೂಕು, ಮನಸಾಪುರ ಗ್ರಾಮದ ಸರ್ವೆ ನಂ.124/ಎ ರಲ್ಲಿ 293 ಎಕರೆ 29 ಗುಂಟೆ ಜಮೀನು ಕರ್ನಾಟಕ ಭೂಸುಧಾರಣೆ ಕಾಯ್ದೆ ಕೆಳಗೆ ಹೆಚ್ಚುವರಿ ಅಂತ ಘೋಷಿಸಿದ ಜಮೀನು ವಿತರಣೆಗೆ ಲಭ್ಯವಿರುತ್ತದೆ. ಈ ಪೈಕಿ 180 ಎಕರೆ ಮಾತ್ರ ಉಪಯೋಗಕ್ಕೆ ಲಭ್ಯವಾಗಿದ್ದು ಉಳಿದ ಜಮೀನು ಗುಡ್ಡಗಾಡು ಹಾಗೂ ಇಳಿಜಾರು ಪ್ರದೇಶದಿಂದ ಮತ್ತು ಕಲ್ಲುಬಂಡೆಗಳಿಂದ ಕೂಡಿರುತ್ತದೆ. ಆದ್ದರಿಂದ ಸದರಿ ಜಮೀನಿನ ಪ್ರದೇಶದಲ್ಲಿ ಪೊಲೀಸರಿಗೆ ನೀಡುವ ತರಬೇತಿಗಳಾದ ಕಮಾಂಡೋ ಆನ್ ಆರ್ಮ್‌ಡ್ ಕಂಬ್ಯಾಟ್, ಅಬಸ್ಟಿಕಲ್ ಕೋರ್ಸ್, ಅಂಬುಶ್ ಟ್ರೈನಿಂಗ್, ಎಕ್ಸ್‌ಪ್ಲೋಸಿವ್ಸ್ ಹ್ಯಾಂಡ್ಲಿಂಗ್, ಡಿಟೆಕ್ಷನ್ ಆಫ್ ಐ.ಇ.ಡಿ. ಮತ್ತು ಡಿಸ್ಪೋಜೇಬಲ್ ಟೀಂ ತರಬೇತಿ, ಸಿವಿಲ್ ಕಾನ್ಸ್‌ಟೇಬಲ್ ತರಬೇತಿ, ಎಸ್ಮಾರ್ಟ್ ಶಾರ್ಪ್ ಶೂಟಿಂಗ್, ಆಂಟಿ ಟೆರರಿಸ್ಟ್ ಮತ್ತು ಆಂಟಿ ನಕ್ಸಲೈಟ್ ತರಬೇತಿ, ಮೌಂಟೆಡ್ ಪೊಲೀಸ್ ತರಬೇತಿ, ಟ್ರಾಫಿಕ್ ತರಬೇತಿ ಕಂಪ್ಯೂಟರ್ ತರಬೇತಿ, ಈಜುಕೊಳ ಹಾಗೂ ಫುಟ್‌ಬಾಲ್, ಹಾಕಿ, ಬಾಸ್ಕೆಟ್ ಬಾಲ್, ಕಬಡ್ಡಿ ಕ್ರೀಡಾಂಗಣಗಳ ಹಾಗೂ ಪೊಲೀಸರಿಗೆ ನೀಡುವ ಇತರೆ ತರಬೇತಿಗಳಿಗೆ ಬಳಸಿಕೊಳ್ಳುವ ಸಲುವಾಗಿ ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 77(3) ಅಡಿ ಸದರಿ ಜಮೀನನ್ನು ಮೀಸಲಿರಿಸುವಂತೆ ಮತ್ತು ಪೊಲೀಸ್ ತರಬೇತಿ ಶಾಲೆಗೆ

ವರ್ಗಾಯಿಸಬೇಕೆಂದು ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ ಇವರು ಪ್ರಸ್ತಾಪಿಸಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 85 ಎಲ್‌ಆರ್‌ಎಂ 2004, ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2006**

ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ ಇವರ ಶಿಫಾರಸ್ಸಿನ ಪ್ರಕಾರ ಕರ್ನಾಟಕ ಭೂಸುಧಾರಣೆ ಕಾಯ್ದೆಯಡಿ ಹೆಚ್ಚುವರಿ ಎಂದು ಘೋಷಣೆಯಾದ 294 ಎಕರೆ 16 ಗುಂಟೆ ಜಮೀನಿನ ಪೈಕಿ ತಹಶೀಲ್ದಾರ್, ಖಾನಾಪುರ ಇವರು ತಮ್ಮ ವರದಿಯಲ್ಲಿ ತೋರಿಸಿದ ಚೆಕ್ಕುಬಂದಿಗೆ ಒಳಪಟ್ಟಂತೆ 180 ಎಕರೆ ಜಮೀನನ್ನು ಕರ್ನಾಟಕ ಭೂಸುಧಾರಣೆ ಕಾಯ್ದೆ ಕಲಂ 77(3)ರ ಕೆಳಗೆ ಸಾರ್ವಜನಿಕ ಉದ್ದೇಶಕ್ಕೆ ಎಂದು ಕಾಯ್ದಿರಿಸಲಾಗಿದೆ. ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ ಇವರ ಶಿಫಾರಸ್ಸಿನ ಪ್ರಕಾರ ಸದರಿ ಜಮೀನನ್ನು ಪೊಲೀಸ್ ತರಬೇತಿ ಶಾಲೆ, ಖಾನಾಪುರ ಈ ಸಂಸ್ಥೆಗೆ ಕೆಳಕಂಡ ಷರತ್ತು ಮತ್ತು ನಿಬಂಧನೆಗಳನ್ನು ಒಳಪಟ್ಟು ವರ್ಗಾಯಿಸಲಾಗಿದೆ.

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಈ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿಡಿಪಿ/ಓಡಿಪಿ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು ಹಾಗೂ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನೆ ಇಲಾಖೆ / ಅಭಿವೃದ್ಧಿ ಪ್ರಾಧಿಕಾರ / ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

4) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

5) ಮುಂಬರುವ ವರ್ಷಗಳಲ್ಲಿ ತರಬೇತಿ ಸಂಸ್ಥೆಯು ಸದರಿ ಜಮೀನನ್ನು ಪೂರ್ಣವಾಗಿ ಬಳಸದೆ ಇದ್ದಲ್ಲಿ ಸರ್ಕಾರದ ಇತರೆ ಇಲಾಖೆಗಳಿಗೆ ಅಗತ್ಯವಿದ್ದಲ್ಲಿ, ಬಳಸದೆ ಇರುವ ಜಮೀನನ್ನು ಪೊಲೀಸ್ ತರಬೇತಿ ಸಂಸ್ಥೆಯು ಸರ್ಕಾರಕ್ಕೆ ಬಿಟ್ಟುಕೊಡತಕ್ಕದ್ದು.

ಕರ್ನಾಟಕ ಭೂಸುಧಾರಣೆ ಕಾಯ್ದೆ 1961, ಕರ್ನಾಟಕ ಭೂಸುಧಾರಣೆ ನಿಯಮಗಳು 1974 ಹಾಗೂ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ನಿಯಮಗಳು ಮತ್ತು ಮಾರ್ಗಸೂಚಿಗಳ ಪ್ರಕಾರ ಜಿಲ್ಲಾಧಿಕಾರಿಗಳು, ಬೆಳಗಾಂ ಇವರು ಸದರಿ ಜಮೀನನ್ನು ಪೊಲೀಸ್ ತರಬೇತಿ ಶಾಖೆ, ಖಾನಾಪುರ ಈ ಸಂಸ್ಥೆಗೆ ವರ್ಗಾವಣೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿ.ಆರ್. 1386 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ).

**ವಿಷಯ:** ಬಸವಕಲ್ಯಾಣದಲ್ಲಿನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯವನ್ನು ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ವತಿಯಿಂದ ಅಭಿವೃದ್ಧಿ ಪಡಿಸಲು ಸಲಹೆಗಾರರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1) ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 25.6.2006 ರಂದು ನಡೆದ ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯ ಸಭೆಯ ನಡವಳಿಗಳು.

2) ಶ್ರೀ ಕೆ.ವೆಂಕಟೇಶ್ವರ ರಾವ್, ನಿವೃತ್ತ ಡೆಪ್ಯುಟಿ ಸೂಪರಿಂಟೆಂಡೆಂಟ್ ಆಫ್ ಆರ್ಕಿಯಾಲಜಿ, ಆರ್ಕಿಯಾಲಜಿಕಲ್ ಸರ್ವೆ ಆಫ್ ಇಂಡಿಯಾ, ಹೈದರಾಬಾದ್ ಇವರ ಮನವಿ ದಿನಾಂಕ: 18.8.2006.

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 25.6.2006 ರಂದು ನಡೆದ ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ಪ್ರಥಮ ಸಭೆಯಲ್ಲಿ ಕರ್ನಾಟಕ ಪ್ರಾಚೀನ ಸ್ಮಾರಕಗಳು ಮತ್ತು ಪ್ರಾಚ್ಯವಸ್ತು ನಿವೇಶನಗಳು ಹಾಗೂ ಅವಶೇಷಗಳ ಸಂರಕ್ಷಣಾ ಅಧಿನಿಯಮದಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಬಸವಕಲ್ಯಾಣ ಅಭಿವೃದ್ಧಿ ಮಂಡಳಿಗೆ ಬಿಟ್ಟುಕೊಡಲು ಹಾಗೂ ಬಸವಕಲ್ಯಾಣದಲ್ಲಿಯ ಅಂತಹ ಸ್ಮಾರಕಗಳ ಸಂರಕ್ಷಣೆಗೆ ಅನುವಾಗುವಂತಹ ಆದೇಶಗಳನ್ನು ಹೊರಡಿಸುವಂತೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸೂಚಿಸಲಾಗಿದೆ. ಅದರಂತೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕ್ರಮ ಜರುಗಿಸುತ್ತಿದೆ.

ಈ ಹಿನ್ನೆಲೆಯಲ್ಲಿ ಬಸವಕಲ್ಯಾಣದಲ್ಲಿನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯವನ್ನು ಒಂದು ಪುರಾತನ, ಪರಂಪರಾ ಸಂರಕ್ಷಣಾ ಕೇಂದ್ರವನ್ನಾಗಿ ಹಾಗೂ ರಾಷ್ಟ್ರೀಯ ಸಂಗ್ರಹಾಲಯ ಮಾದರಿಯಲ್ಲಿ ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ವತಿಯಿಂದ ಅಭಿವೃದ್ಧಿ ಪಡಿಸಲು ಉದ್ದೇಶಿಸಲಾಗಿದೆ. ಈ ಉದ್ದೇಶಕ್ಕಾಗಿ ಪ್ರಾಚ್ಯವಸ್ತು ತಜ್ಞರನ್ನು ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಸಲಹೆಗಾರರನ್ನಾಗಿ ನೇಮಿಸಿಕೊಳ್ಳುವುದು ಅವಶ್ಯಕವಾಗಿರುತ್ತದೆ.

ಶ್ರೀ ಕೆ.ವೆಂಕಟೇಶ್ವರರಾವ್, ನಿವೃತ್ತ ಡೆಪ್ಯುಟಿ ಸೂಪರಿಂಟೆಂಡೆಂಟ್ ಆಫ್ ಆರ್ಕಿಯಾಲಜಿ, ಆರ್ಕಿಯಾಲಜಿಕಲ್ ಸರ್ವೆ ಆಫ್ ಇಂಡಿಯಾ, ಹೈದರಾಬಾದ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಈ ಕಾರ್ಯವನ್ನು ನಿರ್ವಹಿಸಲು ಒಪ್ಪಿ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಅವರು ಈ ವಿಷಯದಲ್ಲಿ ಹೊಂದಿರುವ ಅನುಭವ ಮತ್ತು ಪರಿಣತಿಯನ್ನು ಗಮನದಲ್ಲಿಟ್ಟುಕೊಂಡು ಅವರನ್ನು ಬಸವಕಲ್ಯಾಣದಲ್ಲಿಯ ಪ್ರಾಚ್ಯವಸ್ತು ಸಂಗ್ರಹಾಲಯವನ್ನು ಅಭಿವೃದ್ಧಿಪಡಿಸಲು ಸಲಹೆಗಾರರನ್ನಾಗಿ ನೇಮಿಸಲು ಸರ್ಕಾರವು ನಿರ್ಧರಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 218 ಆರ್‌ಇಹೆಚ್ 2006, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2006**

ಸರ್ಕಾರವು ಶ್ರೀ ಕೆ. ವೆಂಕಟೇಶ್ವರರಾವ್, ನಿವೃತ್ತ ಡೆಪ್ಯುಟಿ ಸೂಪರಿಂಟೆಂಡೆಂಟ್ ಆಫ್ ಆರ್ಕಿಯಾಲಜಿ, ಆರ್ಕಿಯಾಲಜಿಕಲ್ ಸರ್ವೆ ಆಫ್ ಇಂಡಿಯಾ, ಹೈದರಾಬಾದ್ ಇವರನ್ನು ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ವತಿಯಿಂದ ಬಸವ ಕಲ್ಯಾಣದಲ್ಲಿನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯವನ್ನು ರಾಷ್ಟ್ರಮಟ್ಟದ ಸಂಗ್ರಹಾಲಯದ ಮಾದರಿಯಲ್ಲಿ ಅಭಿವೃದ್ಧಿ ಪಡಿಸುವ ಸಲುವಾಗಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸಲಹೆಗಾರರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಿದೆ:

**ಷರತ್ತುಗಳು:**

1) ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು, ಅವರು ಕಾರ್ಯವಹಿಸಿಕೊಂಡ ದಿನಾಂಕದಿಂದ ಒಂದು ವರ್ಷದ ಅವಧಿಗೆ ಇರುತ್ತದೆ;
2) ಈ ಕಾರ್ಯಕ್ಕಾಗಿ ಅವರಿಗೆ ಮಾಸಿಕ 12,200/- ರೂ.ಗಳ ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ;
3) ಈ ಸಲಹೆಗಾರರಿಗೆ ಅವರು ಕಾರ್ಯನಿರ್ವಹಿಸುವ ಅವಧಿಗೆ ಬಸವ ಕಲ್ಯಾಣದಲ್ಲಿ ಉಚಿತ ವಸತಿ ಸೌಲಭ್ಯವನ್ನು ಮಂಡಳಿಯ ವತಿಯಿಂದ ಒದಗಿಸುವುದು;
4) ಇವರು ಕಾರ್ಯನಿಮಿತ್ತ ಕೈಗೊಳ್ಳುವ ಪ್ರವಾಸಗಳಿಗೆ ಸರ್ಕಾರಿ ನಿಯಮಗಳ ಪ್ರಕಾರ ಪ್ರವಾಸ ಭತ್ಯೆ, ದಿನಭತ್ಯೆಯನ್ನು ನೀಡುವುದು;
5) ಸಲಹೆಗಾರರು ಬಸವಕಲ್ಯಾಣದಲ್ಲಿನ ವಸ್ತು ಸಂಗ್ರಹಾಲಯದಲ್ಲಿರುವ ಪ್ರಾಚೀನ ಹಾಗೂ ಚಾರಿತ್ರಿಕ ಮೌಲ್ಯವುಳ್ಳ ಶಿಲ್ಪಕಲೆ ಹಾಗೂ ಇತರೇ ವಸ್ತುಗಳನ್ನು ಸರಿಯಾದ ರೀತಿಯಲ್ಲಿ ಪ್ರದರ್ಶಿಸತಕ್ಕದ್ದು ಹಾಗೂ ಅವುಗಳ ಸಂರಕ್ಷಣೆಯ ಜವಾಬ್ದಾರಿ ಹೊರತಕ್ಕದ್ದು;
6) ವಸ್ತು ಸಂಗ್ರಹಾಲಯದಲ್ಲಿನ ವಸ್ತುಗಳ ರಕ್ಷಣೆ, ನಿರ್ವಹಣೆ ಮತ್ತು ಪ್ರದರ್ಶನದ ಜವಾಬ್ದಾರಿ ವಹಿಸತಕ್ಕದ್ದು;
7) ಈ ಸಲಹೆಗಾರರು ಪ್ರಮುಖವಾದ ಪುರಾತನ ಹಾಗೂ ಪರಂಪರಾ ಮೌಲ್ಯವುಳ್ಳ ಎಲ್ಲಾ ಚಾರಿತ್ರಿಕ ವಸ್ತುಗಳನ್ನು (ವಾಸ್ತುಶಿಲ್ಪ, ಹಳೆಯ ನಾಣ್ಯಗಳು ಹಾಗೂ ಇತರೇ ಸಂಗ್ರಹಣಾಯೋಗ್ಯ ವಸ್ತುಗಳನ್ನು ಸಂಗ್ರಹಿಸತಕ್ಕದ್ದು;
8) ಖಾಸಗಿ ವ್ಯಕ್ತಿಗಳಿಂದ, ಸರ್ಕಾರದ ಇಲಾಖೆ ಸಂಘ ಸಂಸ್ಥೆಗಳಿಂದ ಹಾಗೂ ಇತರೇ ಮೂಲಗಳಿಂದ ಸಂಗ್ರಹಿಸುವ ಎಲ್ಲಾ ವಸ್ತುಗಳನ್ನು ದಾಖಲಿಸಿಕೊಂಡು ಸಂಗ್ರಹಾಲಯದಲ್ಲಿ ಪ್ರದರ್ಶಿಸತಕ್ಕದ್ದು;
9) 5ನೇ ಶತಮಾನದಿಂದ 12ನೇ ಶತಮಾನದವರೆಗೆ ಚಾಲುಕ್ಯ ರಾಜವಂಶದ ಕಾಲದ ಎಲ್ಲಾ ವಾಸ್ತುಶಿಲ್ಪ, ಶಿಲಾಶಾಸನಗಳು ಮತ್ತು ವಿನ್ಯಾಸಗಳನ್ನು ಪಟ್ಟಿ ಮಾಡಿ ಸಂಗ್ರಹಾಲಯದಲ್ಲಿ ಪ್ರದರ್ಶಿಸತಕ್ಕದ್ದು;
10) ಸಲಹೆಗಾರರು ತಮ್ಮ ಕಾರ್ಯ ನಿರ್ವಹಣಾ ಅವಧಿಯಲ್ಲಿ ಅವರಿಗೆ ಲಭ್ಯವಾಗಬಹುದಾದ ಅಥವಾ ಅವರ ತಿಳುವಳಿಕೆಗೆ ಬರಬಹುದಾದ ಮಾಹಿತಿಯ ಗೌಪ್ಯತೆಯನ್ನು ಕಾಪಾಡತಕ್ಕದ್ದು;
11) ಸಲಹೆಗಾರರು ತಮ್ಮ ಕರ್ತವ್ಯ ನಿರ್ವಹಣಾ ಅವಧಿಯಲ್ಲಿ, ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆಯಿಂದಾಗಲೀ ವಸ್ತು ಸಂಗ್ರಹಾಲಯಕ್ಕೆ ಉಂಟಾಗಬಹುದಾದ ನಷ್ಟ ಹಾಗೂ ಹಾನಿಯನ್ನು ತುಂಬಿಕೊಡಲು ಜವಾಬ್ದಾರರಾಗಿರುತ್ತಾರೆ;
12) ಅವರ ದುರ್ನಡತೆ ಅಥವಾ ಕರ್ತವ್ಯ ನಿರ್ಲಕ್ಷತೆಗಾಗಿ ಅವರ ನೇಮಕಾತಿಯನ್ನು ಅವಧಿಗೆ ಮುಂಚೆಯೇ ರದ್ದುಪಡಿಸುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ;
13) ತಮ್ಮ ಈ ಕರ್ತವ್ಯ ನಿರ್ವಹಣೆಯ ಅವಧಿಯಲ್ಲಿ ಅವರು ಇತರೇ ಯಾವುದೇ ಸರ್ಕಾರಿ ಅಥವಾ ಸರ್ಕಾರೇತರ ಕಾರ್ಯನಿಯೋಜನೆಯನ್ನು ಒಪ್ಪಿಕೊಳ್ಳತಕ್ಕದ್ದಲ್ಲ;
14) ಸಲಹೆಗಾರರ ವೇತನ ಹಾಗೂ ಇತರೇ ಭತ್ಯೆಗಳನ್ನು ಆಯುಕ್ತರು, ಬಸವಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವಕಲ್ಯಾಣ ಇವರು ಮಂಡಳಿಯ ನಿಧಿಯಿಂದ ಡ್ರಾ ಮಾಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸ್ವಾ-2/ಪುನರ್ವಸತಿ)

ಪಿ.ಆರ್. 1342

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೃಷ್ಣಪ್ಪ ಕಮಾಂಡೆಂಟ್, 7ನೇ ಪಡೆ, ಕೆ.ಎಸ್.ಆರ್.ಪಿ. ಮಂಗಳೂರು ರವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಪೊಲೀಸ್ ಇನ್ಸ್‌ಪೆಕ್ಟರ್, ಲೋಕಾಯುಕ್ತ, ಮಂಗಳೂರು ರವರ ಪತ್ರದ ಸಂಖ್ಯೆ: ಪಿಐ/ಕೆಎಲ್ಎ/ಮಂ/ಅ.ಕ್ರ/2/2006 ದಿನಾಂಕ: 21.06.2006.

2) ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ(5)7/2006-07, ದಿನಾಂಕ: 15.7.2006.

**ಸರ್ಕಾರದ ಆದೇಶ ಸಂಖ್ಯೆ: ಒಇ 258 ಪೊಸಿಪ 2006, ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2006**

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಕೃಷ್ಣಪ್ಪ, ಕಮಾಂಡೆಂಟ್, ಕೆ.ಎಸ್.ಆರ್.ಪಿ. ಮಂಗಳೂರು ರವರು ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿರುವ ಸಂಬಂಧ ದಿನಾಂಕ: 08.06.2006 ರಂದು ಲೋಕಾಯುಕ್ತರು ದಾಳಿ ನಡೆಸಿ, ಅವರ ವಿರುದ್ಧ ಮಂಗಳೂರು ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ:2/2006 ಕಲಂ 13(1)(ಇ) ಜೊತೆಗೆ 13(2) ಪಿಸಿ ಆ್ಯಕ್ಟ್ 1988 ಪ್ರಕಾರ ಪ್ರಕರಣ ದಾಖಲಿಸಿ ತನಿಖೆ ಕೈಗೊಂಡಿರುತ್ತಾರೆ ಎಂಬುದು ಪೊಲೀಸ್ ಇನ್ಸ್‌ಪೆಕ್ಟರ್, ಲೋಕಾಯುಕ್ತ, ಮಂಗಳೂರು ರವರ ಉಲ್ಲೇಖಿತ ಪತ್ರದಿಂದ ಕಂಡು ಬಂದಿರುತ್ತದೆ. ಆದುದರಿಂದ ಸದರಿಯವರನ್ನು ಕೆ.ಎಸ್.ಪಿ. (ಡಿಪಿ) ನಿಯಮ 1965ರ ನಿಯಮ 5ರ ಪ್ರಕಾರ ದಿನಾಂಕ: 08.06.2006 ರಿಂದ ಅಮಾನತ್ತಿನಲ್ಲಿಡುವಂತೆ ಕೋರಿರುತ್ತಾರೆ.

ಈ ಸಂಬಂಧ ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಕೃಷ್ಣಪ್ಪ, ಕಮಾಂಡೆಂಟ್, 7ನೇ ಪಡೆ, ಕೆ.ಎಸ್.ಆರ್.ಪಿ. ಮಂಗಳೂರು ದಕ್ಷಿಣ ಕನ್ನಡ ಜಿಲ್ಲೆ ರವರ ವಿರುದ್ಧ, ಅವರು ಹೊಂದಿರುವ ಸರ್ಕಾರದ ಹುದ್ದೆ ಮತ್ತು ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಅವರು ಅವರ ಬಲ್ಲಮೂಲಗಳ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿರುತ್ತಾರೆಂದು ತಿಳಿದುಬಂದ ಖಚಿತ ವರ್ತಮಾನದ ಮೇರೆಗೆ ಮಂಗಳೂರು ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ:2/2006 ಕಲಂ 13(1)(ಇ) ಜೊತೆಗೆ 13(2) ಪಿ.ಸಿ. ಆ್ಯಕ್ಟ್ 1988ರ ಪ್ರಕಾರ ಮೊಕದ್ದಮೆ ದಾಖಲಿಸಿ ತನಿಖೆ ಕೈಗೊಂಡಿರುವುದಾಗಿ ವರದಿ ಮಾಡಿರುತ್ತಾರೆ. ಈ ಪ್ರಾಥಮಿಕ ವರದಿಯ ಆಧಾರದ ಮೇಲೆ ಹಾಗೂ ಇವರು ಸುಗಮ ತನಿಖೆಗೆ ಅಡ್ಡಿಪಡಿಸಬಹುದಾದ ಹಾಗೂ ದಾಖಲೆ/ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವುದು ಅವಶ್ಯವೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಗಳು, 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೃಷ್ಣಪ್ಪ, ಕಮಾಂಡೆಂಟ್, 7ನೇ ಪಡೆ, ಕೆ.ಎಸ್.ಆರ್.ಪಿ. ಮಂಗಳೂರು ಇವರ ವಿರುದ್ಧ ಶಿಸ್ತುಕ್ರಮವನ್ನು ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೃಷ್ಣಪ್ಪ, ಕಮಾಂಡೆಂಟ್, 7ನೇ ಪಡೆ, ಕೆ.ಎಸ್.ಆರ್.ಪಿ. ಮಂಗಳೂರು ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೃಷ್ಣಪ್ಪ, ಕಮಾಂಡೆಂಟ್, 7ನೇ ಪಡೆ, ಕೆ.ಎಸ್.ಆರ್.ಪಿ. ಮಂಗಳೂರು ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1382

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ರಾಜ್ಯದ ಖಾಯಂ ಲೋಕ್ ಅದಾಲತ್‌ಗಳಲ್ಲಿನ ಹುದ್ದೆಗಳನ್ನು ತುಂಬುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಲಾ 145 ಎಲ್ಎಡಿ 2005, ದಿನಾಂಕ: 05.12.2005.

2) ಪತ್ರ ಸಂಖ್ಯೆ: ಕರಾಕಾಸೇಪ್ರಾ 42 ಆಡಳಿತ 02 (ಆರ್.ಸಿ), ದಿನಾಂಕ: 27.12.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಬೆಂಗಳೂರು, ಮೈಸೂರು, ಮಂಗಳೂರು, ಧಾರವಾಡ, ಬೆಳಗಾಂ ಮತ್ತು ಗುಲ್ಬರ್ಗಾ ಇಲ್ಲಿ ಖಾಯಂ ಲೋಕ್ ಅದಾಲತ್‌ಗಳನ್ನು ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ನಂತರ ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರ ಇವರು ಮೇಲೆ (2) ರಲ್ಲಿ ಓದಲಾದ ಪತ್ರ ಬರೆಯುತ್ತಾ ಈ ಉಲ್ಲೇಖಿತ ಲೋಕ್ ಅದಾಲತ್‌ಗಳಲ್ಲಿನ ವಿವಿಧ ವೃಂದದ ಹುದ್ದೆಗಳಿಗೆ ನೇಮಕಾತಿ ಮಾಡಿಕೊಳ್ಳಲು ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 145 ಎಲ್ಎಡಿ 2005, ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2006**

ಈ ಮೇರೆಗೆ ಬೆಂಗಳೂರು, ಮೈಸೂರು, ಮಂಗಳೂರು, ಧಾರವಾಡ, ಬೆಳಗಾಂ ಮತ್ತು ಗುಲ್ಬರ್ಗಾ ಇಲ್ಲಿ ಸ್ಥಾಪಿಸಿರುವ ಲೋಕ್ ಅದಾಲತ್‌ಗಳಲ್ಲಿನ ಹುದ್ದೆಗಳಿಗೆ ನಿವೃತ್ತ ಸರ್ಕಾರಿ ನೌಕರರನ್ನು ಈ ಕೆಳಗೆ ನಮೂದಿಸಿರುವಂತೆ ಮಾಸಿಕ ಸಂಚಿತ ವೇತನದಲ್ಲಿ ಒಂದು ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | (ರೂ.) |
|---|---|---|
| 1. | ಶಿರಸ್ತೇದಾರ್ | 5,200.00 |
| 2. | ಪ್ರಥಮ ದರ್ಜೆ ಸಹಾಯಕ | 3,850.00 |
| 3. | ಶೀಘ್ರಲಿಪಿಗಾರ | 4,150.00 |
| 4 | ಕಿರಿಯ ದರ್ಜೆ ಸಹಾಯಕ | 3,000.00 |
| 5 | ಬೆರಳಚ್ಚುಗಾರರು | 3,000.00 |
| 6. | ದಲಾಯತ್ | 2,500.00 |

ಅಂತಹ ನೌಕರರು ಸಂಚಿತ ವೇತನವಲ್ಲದೆ ಯಾವುದೇ ಭತ್ಯೆಗಳನ್ನು ಪಡೆಯುವಂತಿಲ್ಲ ಹಾಗೂ ಸದರಿ ಸೇವೆಯು ಅರ್ಹತಾದಾಯಕ ಸೇವೆಯಾಗುವುದಿಲ್ಲ.

ಅಂತಹ ನೌಕರರನ್ನು ಸಂಬಂಧಪಟ್ಟ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಅಧ್ಯಕ್ಷರು ಗುತ್ತಿಗೆ ಆಧಾರದ ಮೇಲೆ ಒಂದು ವರ್ಷ ಅಥವಾ ಹುದ್ದೆಗಳನ್ನು ಕ್ರಮಬದ್ಧವಾಗಿ ತುಂಬುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ, ನೇಮಕ ಮಾಡಲಿದ್ದು, ಈ ನೌಕರರು ವರ್ಷದಲ್ಲಿ 15 ದಿನಗಳ ಸಾಂಧರ್ಬಿಕ ರಜೆಗೆ ಅರ್ಹರಿದ್ದು ಇಂತಹ ರಜೆಯನ್ನು ಸಾರ್ವಜನಿಕ ಸೇವೆಯ ಅಗತ್ಯತೆ ಗಮನದಲ್ಲಿಟ್ಟುಕೊಂಡು ಮಂಜೂರು ಮಾಡಬಹುದು. ಅದಲ್ಲದೆ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ನೇಮಕಾತಿ) ನಿಯಮಗಳು 1957 ಅನ್ವಯವಾಗಲಿದ್ದು, ಯಾವುದೇ ಪೂರ್ವಭಾವಿ ಸೂಚನೆ ನೀಡದೆ ಯಾವ ಸಮಯದಲ್ಲಾದರೂ ಇವರನ್ನು ಸಂಬಂಧಪಟ್ಟ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಅಧ್ಯಕ್ಷರು ಸೇವೆಯಿಂದ ತೆಗೆದುಹಾಕಬಹುದು.

ಆ ಸಂಬಂಧದ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2014-00-105-0-11 (059-ಇತರೆ ಖರ್ಚು) (ಯೋಜನೆ)ರ ಅಡಿ ಭರಿಸುವುದು.

ಇದಕ್ಕೆ ಆರ್ಥಿಕ ಇಲಾಖೆ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಸಹಮತಿಯನ್ನು ಕ್ರಮವಾಗಿ ಟಿಪ್ಪಣಿ ಸಂಖ್ಯೆ: ಆಇ 327 ವೆಚ್ಚ-7 06, ದಿನಾಂಕ: 15.06.2006 ಹಾಗೂ ಟಿಪ್ಪಣಿ ಸಂಖ್ಯೆ: ಸಿಆಸುಇ 263 ಸೇನಿಸಿ 2006, ದಿನಾಂಕ: 20.07.2006 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲಾ ಹೆಚ್.ಆರ್.**

ಪಿ.ಆರ್. 1344

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**LABOUR SECRETARIAT**

**Subject:** Re.constitution of Karnataka State Apprenticeship council reg.

**Read:** 1) Govt. Order No. SWL 35 ETI 92, Dated: 3.8.95.
2) Govt. Order No. L.D 189 ETI 2000, dated: 7.4.2001.
3) Letter No. DET/TRG/ATS.1/CR-1, 2004-05, dated: 24.6.2004.

**PREAMBLE:**

In Govt. order read at (2) above, sanction was accorded for constitution of Karnataka State Apprenticeship Council for the period of 3 years with the members as detailed in the Annexure to that Order.

The Commissioner, Employment & Training Bangalore, in his letter read at (3) above has requested to re-constitute the Karnataka State Apprenticeship Council since its term has ended on 6.4.2004.

After examining the matter in detail government have decided to re-constitute the Karnataka State Apprenticeship Council and hence issue this orders.

**GOVERNMENT ORDER No. LD 151 ETI 2004, Bangalore, Dated: 1st September 2006**

In exercise of the powers conferred under sub-sec 4 of sec 24 of Apprentice Act 1961, read with sub-rule (1) of rule-4 of the Karnataka State Apprentice Council Rules 1962 Government are pleased to re-constitute the Karnataka State Apprenticeship Council with the members as detailed in Annexure to this order with effect from the date of this order for a period of three years.

The non official members of the council are entitled for travelling allowance/daily allowance as per Annexure-A to the Karnataka Civil Service Rules as amended from time to time.

The expenditure with regard to TA/DA payable to the members of the Council shall be met under the Head of Account "2230-Labour and Employment-02 Employment and Training -001-Direction and Administration-01-Directorate of Employment and Training 2 Travelling Expenses (Nonplan)".

By Order and in the name of the Governor of Karnataka,

**V. SREERAMA REDDY**

Desk Officer, Labour Department, (Empt & Trg)

**ANNEXURE TO THE GOVERNMENT ORDER NO. LD 151 ETI 2004, DATED: 01.09.2006**

List of Members for the 19th Karnataka State Apprenticeship Council.

| | | |
|---|---|---|
| 01 | Hon'ble Minister for Labour, Government of Karnataka, Bangalore. | Chairman |
| | **Representative of State Government:** | |
| 01 | The Principal Secretary to Government, Labour Department, Bangalore | Vice Chairman |
| 02 | The Commissioner Ex-Officio State Apprenticeship Adviser, Empt and Trg, Bangalore. | Member Secretary |
| 03 | The Principal Secretary to Govt. Finance Department, Bangalore. | Member |
| 04 | The Principal Secretary to Govt. Education Department, Bangalore. | Member |
| 05 | The Principal Secretary to Government, Planning Department, Bangalore. | Member |
| 06 | The Principal Secretary to Govt, Commerce and Industries Department, Bangalore. | Member |
| 07 | The Secretary to Govt. Law Department, Bangalore | Member |
| 08 | Sri Ellappa S/o Murugevva, Nidushishe post, (SC), Kustagi Taluk, Koppal District. | Member |
| 09 | Sri Basappa Nayaka S/o Ayyappa, Nayakara Oni, (ST.) Gangavathi Taluk, Koppal Dist. | Member |
| | **Representative of Central Government:** | |
| 01 | The Director General of Employment and Training, D.G.E.T. New Delhi or a Representative of the Director General of Employment and Training | Member |
| 02 | The Regional Director Regional Directarate of Employment and Training Hydrabad. | Member |
| | **Representative of the Employers in the public Sector:** | |
| 01 | Training Manager, B.H.E.L., Mysore Road, Bangalore or Representative. | Member |

| | | |
|---|---|---|
| 02 | Training Manager,<br>Hotel Ashoka, Kumara park Road, Bangalore or Representative. | Member |
| 03 | Managing Director,<br>Government tool Room and Training Center, Bangalore or Representative. | Member |
| 04 | Training Manager,<br>Bharath Earth Movers Limited, B.E.M.L. Nagar, K.G.F. or Representative. | Member |
| 05 | Director,<br>Industrial Training Center, Karnataka Electricity Board, Ananda Rao Circle, Bangalore or Representative | Member |
| 06 | Training Manager,<br>B.E.L., Jalahalli, Bangalore or Representative. | Member |
| 07 | Training Manager,<br>Mysore Paper Mills, Bhadravathi or Representative. | Member |
| 08 | D.G.M Training & Development, Indian Telephone Industries (ITI) K.R.Puram, Bangalore or Representative | Member |
| 09 | Training Manager,<br>H.A.L. Training Centre, Bangalore or Representative. | Member |
| **Representative of the Employers in the Private Sector:** | | |
| 01 | Training Manager,<br>Hotel Taj West End, Race Course road, Bangalore or Representative. | Member |
| 02 | Training Manager,<br>Tayota Kirloskar Motor Co. Jigani, Bangalore or Representative. | Member |
| 03 | Training Manager, Kirloskar electric company, Bangalore or Representative. | Member |
| 04 | General Manager,<br>Motor Industries co., Adugodi, Bangalore or Representative. | Member |
| 05 | Training Manager,<br>Kenna Metal Widia, India, Tumkur road, Bangalore, or Representative. | Member |
| 06 | Training Manager,<br>L & T Komatsu, Bangalore or Representative. | Member |
| 07 | Managing Director,<br>Manipal Power Press, Udupi or Representative. | Member |
| 08 | Training Manager,<br>Mysore Kirloskar Co., Harihar, Davangere Dist or Representative. | Member |
| 09 | Managing Director,<br>N.T.T.F. Peenya, Bangalore or Representative. | Member |
| **Persons having Special Knowledge & Experience in Matters relating to Industry Labour & Technical Education** | | |
| 01 | A.V.B.R.K. Brahman,<br>Training Expert, No.14, 10th Main FTI colony, Nandini Layout, Bangalore | Member |
| 02 | Secretary,<br>Skip Skill for Progress Museum Road, Bangalore or Representative | Member |
| 03 | Principal,<br>Seva Sadana, Tech Training Institute, Sarjapur road, Bangalore or Representative. | Member |
| 04 | Chairman,<br>Institute of Engineers, Vidhana Veedhi, Bangalore or Representative | Member |
| 05 | President,<br>A.I.T.U.C. Bangalore or Representative | Member |
| 06 | Chairman,<br>Confederation of Indian Industry, Manipal Centre, Bangalore or Representative. | Member |

| | | |
|---|---|---|
| 07 | President,<br>F.K.C.C.I, K.G.Road, Bangalore or Representative. | Member |
| 08 | Sri M.K. Sudharshan,<br>General Secretary, Bharath Heavy Electricals Employees Trade Union,<br>B.H.E.L., Mysore Road, Bangalore-26 | Member |
| 09 | Director,<br>Vocational Education Dept. Bangalore or Representatives. | Member |
| | **Two Representatives of Technical Education Committee or Board** | |
| 01 | Director, Technical Education Dept. Bangalore or Representative | Member |
| 02 | Secretary,<br>Technical Education Department, Examination Board, Bangalore or Representative. | Member |

**V. SREERAMA REDDY**
P.R. 1316 Desk Officer, Labour Department, (Empt & Trg)

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ:** ಹಾಲಿ ಕಾರ್ಯನಿರ್ವಹಿಸುತ್ತಿರುವ ಯಾಂತ್ರಿಕ ದೋಣಿಗಳ ಉದ್ದ ಮತ್ತು ಅಗಲವನ್ನು ಹೆಚ್ಚಿಸುವುದು ಹಾಗೂ ಹೆಚ್ಚಿನ ಅಶ್ವಶಕ್ತಿಯ ಇಂಜಿನ್‌ಗಳನ್ನು ಅಳವಡಿಸಲು ಸಾಧ್ಯತಾ ಪ್ರಮಾಣ ಪತ್ರವನ್ನು ನೀಡಲು ಹೊಸ ಯಾಂತ್ರಿಕ ದೋಣಿಗಳ ನಿರ್ಮಾಣಕ್ಕೆ ಸಾಧ್ಯತಾ ಪ್ರಮಾಣ ಪತ್ರವನ್ನು ನೀಡಲು ಈ ಹಿಂದೆ ರಚಿಸಿರುವ ಸಮಿತಿಗಳಿಗೆ ಅಧಿಕಾರ ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಎಹೆಚ್‌ಎಫ್ 481 ಎಸ್‌ಎಫ್‌ಎಂ 94, ದಿನಾಂಕ: 15.12.1994.
2) ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಂಇಎಫ್ 33 2005-06, ದಿನಾಂಕ: 18.04.2006 ಮತ್ತು 20.06.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ 48 ಅಡಿಗಿಂತ ಹೆಚ್ಚು ಉದ್ದದವರೆಗಿನ ಯಾಂತ್ರೀಕೃತ ಮೀನುಗಾರಿಕೆ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪ್ರಮಾಣ ಪತ್ರವನ್ನು ನೀಡುವ ಅಧಿಕಾರವನ್ನು ಈ ಹಿಂದೆ ಸರ್ಕಾರದ ಆದೇಶ ಸಂಖ್ಯೆ: ಎಹೆಚ್‌ಎಫ್ 73 ಎಸ್‌ಎಫ್‌ಎಂ 88, ದಿನಾಂಕ: 21.12.1988 ರಲ್ಲಿ 36 ಅಡಿ ಉದ್ದದ ಯಾಂತ್ರಿಕೃತ ಮೀನುಗಾರಿಕೆ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪ್ರಮಾಣ ಪತ್ರ ನೀಡಲು ಈ ಸಂಬಂಧಿತ ರಚಿಸಲಾಗಿರುವ ಸಮಿತಿಗೆ ಅಧಿಕಾರವನ್ನು ನೀಡಿ ಆದೇಶ ಹೊರಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಮೀನುಗಾರಿಕೆ ನಿರ್ದೇಶಕರ ದಿನಾಂಕ: 18.04.2006ರ ಪತ್ರದಲ್ಲಿ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಹಾಲಿ ಯಾಂತ್ರಿಕ ದೋಣಿಗಳನ್ನು ಹೊಂದಿರುವ ಮೀನುಗಾರರು ದೋಣಿಗಳನ್ನು ಮಾರ್ಪಡಿಸಿ ಉದ್ದ ಮತ್ತು ಅಗಲವನ್ನು ಹೆಚ್ಚಿಸುವುದು ಹಾಗೂ ಅದಕ್ಕನುಗುಣವಾಗಿ ಹೆಚ್ಚಿನ ಅಶ್ವಶಕ್ತಿಯ ಇಂಜಿನ್‌ಗಳನ್ನು ಅಳವಡಿಸಿ ಮೀನುಗಾರಿಕೆ ಶಕ್ತಿಯನ್ನು ಹೆಚ್ಚಿಸಲು ಅನುಮತಿ ಕೋರುತ್ತಿರುವುದು ಕಂಡು ಬರುತ್ತಿದೆಯೆಂದು, ಒಮ್ಮೆ ದೋಣಿಯ ಉದ್ದವನ್ನು ಹೆಚ್ಚಿಸಿ ಅದಕ್ಕೆ ಹೆಚ್ಚಿನ ಅಶ್ವಶಕ್ತಿಯ ಇಂಜಿನ್‌ಗಳನ್ನು ಅಳವಡಿಸಿದಾಗ ಹೆಚ್ಚಿಸಿದ ಅಶ್ವಶಕ್ತಿಗನುಗುಣವಾಗಿ ದಿನಂಪ್ರತಿ ನೀಡುವ ಕರರಹಿತ ಡೀಸಲ್ ಪ್ರಮಾಣವನ್ನು ಮಂಜೂರು ಮಾಡಲು ಕೋರಿ ಪ್ರಸ್ತಾವನೆಗಳು ಬರುತ್ತಿರುವುದಲ್ಲದೆ ಇಂತಹ ಮಾರ್ಪಾಡು ಆದಾಗ ಕೇಂದ್ರ ಅಬ್ಕಾರಿ ಶುಲ್ಕ ರಿಯಾಯಿತಿ ಯೋಜನೆಯ ಸೌಲಭ್ಯದಲ್ಲಿಯೂ ಸಹ ಹೆಚ್ಚಳವಾಗುತ್ತದೆಂದು ತಿಳಿಸುತ್ತಾ, ಇಲಾಖೆಯಲ್ಲಿ ಪ್ರಸಕ್ತವಾಗಿ ಈ ರೀತಿಯ ದೋಣಿಯ ಪರಿವರ್ತನೆಗೆ ಅನುಮತಿ ನೀಡಲು ಯಾವುದೇ ಮಾನದಂಡ ಇಲ್ಲವಾದ್ದರಿಂದ ಹಾಗೂ ಯಾವುದೇ ಮಾರ್ಪಾಡಿಗೆ ಮೊದಲು ದೋಣಿಯ ಮಾಲೀಕರು ಇಲಾಖಾ ಅನುಮತಿಯನ್ನು ಪಡೆದು ಪರಿವರ್ತಿಸಿ ಕಾರ್ಯಕ್ಕೆಗೊಳ್ಳಬೇಕೆಂಬುದರ ಹಿನ್ನೆಲೆಯಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಯಾಂತ್ರಿಕ ದೋಣಿಗಳ ಮಾಲೀಕರು ದೋಣಿಗಳ ಉದ್ದ ಮತ್ತು ಅಗಲವನ್ನು ಹೆಚ್ಚಿಸಿ ಅದಕ್ಕನುಗುಣವಾಗಿ ಹೆಚ್ಚಿನ ಅಶ್ವಶಕ್ತಿಯ ಇಂಜಿನ್‌ಗಳನ್ನು ಅಳವಡಿಸಿ ಪರಿವರ್ತಿಸಲು ಇಲಾಖಾ ಸಾಧ್ಯತಾ ಪ್ರಮಾಣ ಪತ್ರವನ್ನು ನೀಡುವ ಅಧಿಕಾರವನ್ನು ಈ ಹಿಂದೆ ಹೊಸ ಮೀನುಗಾರಿಕೆ ದೋಣಿಗಳಿಗೆ ಸಾಧ್ಯತಾ ಪತ್ರ ನೀಡಲು ಸರ್ಕಾರದ ಆದೇಶ ಸಂಖ್ಯೆ: ಎಹೆಚ್‌ಎಫ್ 13 ಎಸ್‌ಎಫ್‌ಎಂ 88 ದಿನಾಂಕ: 21.12.88 ಮತ್ತು ಎಹೆಚ್‌ಎಫ್ 236 ಮೀಇಇ 2002, ದಿನಾಂಕ: 26.12.2002 ರಲ್ಲಿ ಅಧಿಕಾರ ನೀಡಿ ಈ ಸಂಬಂಧಿತ ರಚಿತವಾಗಿರುವ ಜಿಲ್ಲಾ ಸಮಿತಿಗಳಿಗೆ ನೀಡಲು ಸರ್ಕಾರದ ಆದೇಶ ಹೊರಡಿಸುವಂತೆ ಕೋರಲಾಗಿದೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 68 ಮೀಇಇ 2006, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2006**

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಯಾಂತ್ರಿಕ ದೋಣಿಗಳ ಮಾಲೀಕರು ದೋಣಿಗಳ ಉದ್ದ ಮತ್ತು ಅಗಲವನ್ನು ಹೆಚ್ಚಿಸಿ ಹಾಗೂ ಅದಕ್ಕನುಗುಣವಾಗಿ ಹೆಚ್ಚಿನ ಅಶ್ವಶಕ್ತಿಯ ಇಂಜಿನ್‌ಗಳನ್ನು ಅಳವಡಿಸಿ ಪರಿವರ್ತಿಸಲು ಮೀನುಗಾರಿಕೆ ಇಲಾಖೆಯಿಂದ ಸಾಧ್ಯತಾ ಪ್ರಮಾಣ ಪತ್ರವನ್ನು ನೀಡುವ ಅಧಿಕಾರವನ್ನು ಈ ಹಿಂದೆ ಹೊಸ ಮೀನುಗಾರಿಕೆ ದೋಣಿಗಳಿಗೆ ಸಾಧ್ಯತಾ ಪ್ರಮಾಣ ಪತ್ರವನ್ನು ನೀಡಲು ಸರ್ಕಾರದ ಆದೇಶ ಸಂಖ್ಯೆ: ಎಹೆಚ್‌ಎಫ್ 73 ಎಸ್‌ಎಫ್‌ಎಂ 88, ದಿನಾಂಕ: 21.12.1988 ಮತ್ತು ಎಹೆಚ್‌ಎಫ್ 236 ಮೀಇಇ 2002, ದಿನಾಂಕ: 26.12.2002 ರಲ್ಲಿ ಅಧಿಕಾರ ನೀಡಿ ಈ ಸಂಬಂಧಿತ ರಚಿತವಾಗಿರುವ ಜಿಲ್ಲಾ ಸಮಿತಿಗಳಿಗೆ ನೀಡಿ ಆದೇಶಿಸಿದೆ.

ಈ ಸಮಿತಿಗಳು ದೋಣಿಯ ಪರಿವರ್ತನೆಗೆ ಸಾಧ್ಯತಾ ಪ್ರಮಾಣ ಪತ್ರವನ್ನು ನೀಡುವಾಗ ಅನುಸರಿಸಬೇಕಾದ ಮಾರ್ಗಸೂಚಿಯನ್ನು ಈ ಆದೇಶದ ಅನುಬಂಧದಲ್ಲಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ. ಕಮಲಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 68 ಮೀಇಇ 2006, ದಿನಾಂಕ: 08.09.2006ರ ಅನುಬಂಧ**

**ದೋಣಿಗಳ ಉದ್ದ ಮತ್ತು ಅಗಲವನ್ನು ಹೆಚ್ಚಿಸಿ ಅದಕ್ಕನುಗುಣವಾಗಿ ಹೆಚ್ಚಿನ ಅಶ್ವಶಕ್ತಿಯ ಇಂಜಿನ್ ಅಳವಡಿಸುವ ಸಂಬಂಧ ಮೀನುಗಾರಿಕೆ ಇಲಾಖೆಯಿಂದ ಸಾಧ್ಯತಾ ಪ್ರಮಾಣ ಪತ್ರವನ್ನು ನೀಡುವ ಬಗ್ಗೆ ಮಾರ್ಗಸೂಚಿ**

1. ಯಾವುದೇ ಯಾಂತ್ರಿಕ ದೋಣಿಯ ಉದ್ದವನ್ನು ಹೆಚ್ಚಿಸಲು ಹಾಗೂ ಹೆಚ್ಚಿನ ಅಶ್ವಶಕ್ತಿಯ ಇಂಜಿನ್‌ಗಳ ಅಳವಡಿಕೆಗೆ ಸೂಕ್ತ ಸಮರ್ಥನೆಯನ್ನು ಅಗತ್ಯ ದಾಖಲೆಗಳೊಂದಿಗೆ ಪ್ರತಿಯೊಂದು ದೋಣಿಗೆ ಸಂಬಂಧಪಟ್ಟಂತೆ ಪರಿಶೀಲಿಸಿ ಅಗತ್ಯತೆಗೆ ಅನುಸಾರವಾಗಿ ಅನುಮತಿಯನ್ನು ನೀಡತಕ್ಕದ್ದು.
2. ಈ ರೀತಿಯ ದೋಣಿಯ ಪರಿವರ್ತನೆ ಕೇವಲ ಹೆಚ್ಚಿನ ರಾಜ್ಯ ಕರ ರಹಿತ ಡೀಸಲ್ ಸೌಲಭ್ಯವನ್ನು ಪಡೆಯುವ ಏಕೈಕ ಉದ್ದೇಶವನ್ನು ಹೊಂದಿರಬಾರದು. ಸಾಧ್ಯತಾ ಅನುಮತಿಯನ್ನು ನೀಡುವಾಗ ಸಮಿತಿಯು ಈ ಬಗ್ಗೆ ನಿಗಾವಹಿಸತಕ್ಕದ್ದು. ಅಲ್ಲದೆ ದೋಣಿಯ ಹಿಂದಿನ ಕಾರ್ಯನಿರ್ವಹಣಾ ಅವಧಿಯನ್ನು ಪರಿಗಣಿಸತಕ್ಕದ್ದು.
3. ಇಂಜಿನ್‌ಗಳ ಬದಲಾವಣೆ, ದೋಣಿಯ ಉದ್ದ ಹೆಚ್ಚಿಸುವ ಮುಂತಾದ ವಿಷಯಗಳಿಗೆ ಸಂಬಂಧಪಟ್ಟಂತೆ ಇಂಜಿನ್ ಖರೀದಿ ಬಿಲ್ಲುಗಳು, ದೋಣಿ ನಿರ್ಮಾಣ ಕೇಂದ್ರದ ದಾಖಲೆ ಮುಂತಾದ ಅಗತ್ಯವಾದ ದಾಖಲೆಗಳನ್ನು ಪರಿಶೀಲಿಸುವುದು.
4. ಅನುಮತಿ ಪಡೆದ ನಂತರವೇ ದೋಣಿಯ ಮಾಲೀಕರು ದೋಣಿಯ ಪರಿವರ್ತನೆ ಕೈಗೊಳ್ಳುವುದು. ಪರಿವರ್ತನೆಯ ನಂತರ ಬಂದರು ಇಲಾಖೆಯ ನೋಂದಣಿಯಲ್ಲಿ ಸೂಕ್ತ ಮಾರ್ಪಾಡಿನೊಂದಿಗೆ ದಾಖಲೆಗಳನ್ನು ಪಡೆದು ಅನುಗುಣವಾಗಿ ಇಲಾಖಾ ಗುರುತಿನ ಚೀಟಿ ಪುಸ್ತಕದಲ್ಲಿ ಬದಲಾವಣೆಯನ್ನು ದೃಢೀಕರಣದೊಂದಿಗೆ ದಾಖಲಿಸುವುದು.
5. ಪರಿವರ್ತನೆಗೆ ಅನುಮತಿ ನೀಡಿದ ಮೂರು ತಿಂಗಳೊಳಗೆ ದೋಣಿಯ ಪರಿವರ್ತನೆ ಪೂರ್ಣಗೊಳಿಸುವುದು ಇಲ್ಲದಿದ್ದಲ್ಲಿ ಮತ್ತೊಮ್ಮೆ ಸಮಿತಿಯ ಸಭೆಯಲ್ಲಿ ಮಂಡಿಸಿ ತೀರ್ಮಾನ ಕೈಗೊಳ್ಳುವುದು.
6. ಈ ರೀತಿ ಪರಿವರ್ತನೆಗೆ ಅರ್ಜಿಗಳನ್ನು ಸ್ವೀಕರಿಸಿದ ಹಾಗೂ ಈ ಸಾಧ್ಯತಾ ಪತ್ರಗಳನ್ನು ನೀಡಿದ ವಿವರಗಳನ್ನೊಳಗೊಂಡ ದಾಖಲೆ ಪುಸ್ತಕವನ್ನು ಇಟ್ಟು ನಿರ್ವಹಿಸುವುದು ಪ್ರತಿ ಸಭೆಯ ನಂತರ ನಡವಳಿಗಳೊಂದಿಗೆ ವರದಿಯನ್ನು ನಿರ್ದೇಶನಾಲಯಕ್ಕೆ ಒಪ್ಪಿಸುವುದು.

**ಡಿ. ಕಮಲಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1376 ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

## ಲೋಕೋಪಯೋಗಿ ಸಚಿವಾಲಯ

**ಸೇರ್ಪಡೆ ಸಂಖ್ಯೆ: ಲೋಇ 320 ಸೇಸಎ 2004, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2006**

ಭಾರತದ ಸಂವಿಧಾನದ 85ನೇ ತಿದ್ದುಪಡಿಯನ್ನು ಜಾರಿಗೊಳಿಸಿದ್ದರ ಪರಿಣಾಮವಾಗಿ ಕರ್ನಾಟಕ ಸರ್ಕಾರವು ದಿನಾಂಕ: 27.4.1978 ರಿಂದ ಜಾರಿಗೆ ಬರುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಧಿಕಾರಿ : ನೌಕರರಿಗೂ ಪದೋನ್ನತಿಯೊಂದಿಗೆ ಜೇಷ್ಠತೆಯನ್ನು ನೀಡಬೇಕೆಂದು ಅವಕಾಶ ಕಲ್ಪಿಸಿ ಎರಡು ಸುಗ್ರೀವಾಜ್ಞೆಗಳನ್ನು ಜಾರಿಗೆ ತಂದ ಪರಿಣಾಮವಾಗಿ ಶ್ರೀ ಬಡಪ್ಪನವರ್‌ರವರ ಪ್ರಕರಣದ ಪ್ರಕಾರ ತಯಾರಿಸಿ ಹೊರಡಿಸಿದ್ದ ಲೋಕೋಪಯೋಗಿ ಮತ್ತು ಜಲ ಸಂಪನ್ಮೂಲ ಇಲಾಖೆಗೆ ಸೇರಿದ ಇಂಜಿನಿಯರುಗಳ ಜೇಷ್ಠತಾ ಪಟ್ಟಿಗಳನ್ನು ಪರಿಷ್ಕರಿಸುವ ಅಗತ್ಯತೆ ಉಂಟಾಗಿದ್ದರಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 11.4.2002ರ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 132 ಎಸ್‌ಎಜಿ 2002 ರಲ್ಲಿ ಪ್ರಕಟಿಸಲಾಗಿದೆ.

ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಯ ಇಂಜಿನಿಯರುಗಳು ಭಾರತ ಸಂವಿಧಾನದ 85ನೇ ತಿದ್ದುಪಡಿಯನ್ನು ಪ್ರಶ್ನಿಸಿ ಭಾರತದ ಸರ್ವೋನ್ನತ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ದಾಖಲು ಮಾಡಿದ್ದು, ಆ ಅರ್ಜಿಗಳಲ್ಲಿ ದಿನಾಂಕ: 8.4.2002 ರಂದು ಕೆಳಕಂಡಂತೆ ಮಧ್ಯಂತರ ಆದೇಶವನ್ನು ನೀಡಿದೆ:

"A question of Constitutional law arises. It is, therefore appropriate that these petitions should be heard by a Constitution Bench.

In so far interim relief is concerned, the respondents shall not revert the petitioners nor affect their standing in the seniority list and promotion, pay etc. At the same time, it shall be open to the respondents to promote those who are benefited by the impugned amendment but so that it does not affect the petitioners in any manner and subject to the result of the write petitions."

ಮೇಲ್ಕಂಡ ಆದೇಶವನ್ನು ಅನುಸರಿಸಿ, ರಿಟ್ ಅರ್ಜಿದಾರರುಗಳ ಸೇವಾ ಜೇಷ್ಠತೆಯನ್ನು ಸಂರಕ್ಷಿಸಿ ಅವರುಗಳ ಜೇಷ್ಟತೆಯನ್ನು ಡಾಲರ್ ಚಿಹ್ನೆಯನ್ನು ತೋರಿಸುವ ಮೂಲಕ ಸಂವಿಧಾನ ಪೀಠದ ಮುಂದೆ ಇತ್ಯರ್ಥವಾಗುವ ತೀರ್ಪಿಗೆ ಅನುಸಾರವಾಗಿ ಪುನರ್ ಪರಿಷ್ಕರಣೆಗೆ ಒಳಪಟ್ಟು ತಾತ್ಕಾಲಿಕವಾಗಿ ನಿಗದಿಪಡಿಸಲಾಗಿದೆ. ಶ್ರೀ ಮಹೇಶ್ ಎಂ. ಹಿರೇಮಠ ರವರೂ ಸಹ ಸದರಿ ರಿಟ್ ಅರ್ಜಿಗಳಲ್ಲಿ ಒಬ್ಬ ಅರ್ಜಿದಾರರಾಗಿದ್ದರಿಂದ, ದಿನಾಂಕ: 11.4.2002 ರಂದು ಪ್ರಕಟಿಸಲಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಅವರ ಜೇಷ್ಠತೆಯನ್ನು ಸಾಮಾನ್ಯ ವರ್ಗ ಕ್ರಮ ಸಂಖ್ಯೆ: 1331 ರಲ್ಲಿ ಸಹಾಯಕ ಇಂಜಿನಿಯರ್ ವೃಂದದಲ್ಲಿ ಅವರಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಹಾಗೂ ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಬೈಲಾಂಜನಪ್ಪ, ರವರಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿ ಪ್ರತಿಬಿಂಬಿಸಲಾಗಿದೆ. ಈ ಜೇಷ್ಠತೆಯನ್ನು ಆಧರಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 88 ಎಸ್‌ಪಿಜಿ 2002, ದಿನಾಂಕ: 19.4.2002 ರಲ್ಲಿ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿ ನೀಡಲಾಗಿದೆ.

ಈಗ ಶ್ರೀ ಮಹೇಶ್ ಎಂ ಹಿರೇಮಠ, ರವರು ತಾವು ಬೇಡ ಜಂಗಮ ಜಾತಿಗೆ ಸೇರಿದ್ದು, ಸಮಾಜ ಕಲ್ಯಾಣ ಇಲಾಖೆಯು ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 66 ಬಿಸಿಎ 86, ದಿನಾಂಕ: 13.10.1986 ರಲ್ಲಿ, ಬೇಡ ಜಂಗಮ ಜಾತಿಯನ್ನು ಪರಿಶಿಷ್ಟ ಜಾತಿಯಡಿ ಸೇರಿಸಿ ಆದೇಶ ಹೊರಡಿಸಿರುವುದರಿಂದ, ತಮ್ಮನ್ನು ಪರಿಶಿಷ್ಟ ಜಾತಿಗೆ ಸೇರಿದವರೆಂದು ಪರಿಗಣಿಸಿ, ಅದರಂತೆ ಲಭ್ಯವಾಗುವ ಮುಂಬಡ್ತಿ ಸೌಲಭ್ಯಗಳನ್ನು ನೀಡುವಂತೆ ಕೋರಿರುತ್ತಾರೆ. ಸಮಾಜ ಕಲ್ಯಾಣ ಇಲಾಖೆಯ ಸುತ್ತೋಲೆ ಸಂಖ್ಯೆ: ಎಸ್‌ಡಬ್ಲ್ಯೂಡಿ 132 ಎನ್‌ಎಡಿ 97, ದಿನಾಂಕ: 8.2.2000 ದಲ್ಲಿ ಸೂಚಿಸಿದಂತೆ

ಜಿಲ್ಲಾ ಮಟ್ಟದ ಜಾತಿ ಪರಿಶೀಲನಾ ಸಮಿತಿಯಿಂದ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಒದಗಿಸಿದ್ದು, ಅದರಂತೆ ಇವರು ಪರಿಶಿಷ್ಟ ಜಾತಿಯಡಿಯಲ್ಲಿ ಬರುವ ಬೇಡ ಜಂಗಮ ಜಾತಿಗೆ ಸೇರಿದವರಾಗಿರುತ್ತಾರೆ. ದಿನಾಂಕ: 11.4.2002 ರಂದು ಪ್ರಕಟಿಸಲಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಇವರು ಮಾನ್ಯ ಸರ್ವೋನ್ನತ ನ್ಯಾಯಾಲಯದ ಮಧ್ಯಂತರ ತೀರ್ಪಿನನ್ವಯ ರಕ್ಷಿತ ಅರ್ಜಿದಾರರು (ಡಾಲರ್ ಚಿಹ್ನೆ) ಎಂದು ಪರಿಗಣಿಸಿ, ಇವರ ಜೇಷ್ಠತೆಯನ್ನು ಸಾಮಾನ್ಯ ವರ್ಗ ಕ್ರಮ ಸಂಖ್ಯೆ: 1331 ರಲ್ಲಿ, ಸಹಾಯಕ ಇಂಜಿನಿಯರ್ ವೃಂದದಲ್ಲಿ ಅವರಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಹಾಗೂ ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಬೈಲಾಂಜನಪ್ಪ, ರವರಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿ ಪ್ರತಿಬಿಂಬಿಸಲಾಗಿರುವುದರಿಂದ, ಸದರಿ ವೃಂದದ ಜೇಷ್ಠತೆಯನ್ನು ಪುನರ್‌ನಿಗದಿಪಡಿಸುವ ಅವಶ್ಯಕತೆ ಇರುವುದಿಲ್ಲ.

ಶ್ರೀ ಮಹೇಶ್ ಎಂ. ಹಿರೇಮಠ, ರವರಿಗಿಂತ ಸೇವೆಯಲ್ಲಿ ಕಿರಿಯರಾದ ಹಾಗೂ ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಬೈಲಾಂಜನಪ್ಪ ರವರಿಗೆ ದಿನಾಂಕ: 10.12.1997 ರಂದು ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿ ನೀಡಿದ್ದು, ದಿನಾಂಕ: 11.4.2002 ರಂದು ಪ್ರಕಟಿಸಲಾದ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಅವರಿಗೆ ಅರ್ಹತಾ ದಿನಾಂಕ: 26.2.1999 ಲಭ್ಯವಾಗಿದೆ. ಹಾಗೂ ಅವರ ಜೇಷ್ಠತೆಯನ್ನು ಕ್ರ.ಸಂ. 2006 ರಲ್ಲಿ ಪ್ರತಿಬಿಂಬಿಸಲಾಗಿದೆ. ಈಗ ಇವರನ್ನು ಅನುಸರಿಸಿ, ಶ್ರೀ ಮಹೇಶ್ ಎಂ. ಹಿರೇಮಠ, ರವರ ಜೇಷ್ಠತೆಯನ್ನು ದಿನಾಂಕ: 11.4.2002ರ ಕಾರ್ಯಪಾಲಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡಿಸಿ ಪ್ರಕಟಿಸುವ ಬಗ್ಗೆ ಪರಿಶೀಲಿಸಲಾಗಿದೆ.

ಶ್ರೀ ಮಹೇಶ್ ಎಂ. ಹಿರೇಮಠ, ರವರು ಪರಿಶಿಷ್ಟ ಜಾತಿಗೆ ಸೇರಿದ ಅಧಿಕಾರಿಯಾಗಿದ್ದು, ಇವರಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಬೈಲಾಂಜನಪ್ಪ, ರವರಿಗೆ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿ ನೀಡಿದ ದಿನಾಂಕ ಹಾಗೂ ದಿನಾಂಕ: 11.4.2002 ರಂದು ಪ್ರಕಟಿಸಲಾದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಲಭ್ಯವಾದ ಅರ್ಹತಾ ದಿನಾಂಕವನ್ನು ಗಣನೆಗೆ ತೆಗೆದುಕೊಂಡು, ಶ್ರೀ ಮಹೇಶ್ ಎಂ. ಹಿರೇಮಠ ರವರಿಗೆ ದಿನಾಂಕ: 11.4.2002 ರಂದು ಪ್ರಕಟಿಸಲಾದ ಕಾರ್ಯಪಾಲಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಸೂಕ್ತ ಜೇಷ್ಠತೆಯನ್ನು ನಿಗದಿಪಡಿಸಲು ಉದ್ದೇಶಿಸಲಾಗಿದೆ. ಈ ಕ್ರಮವನ್ನು ಯಾವುದೇ ಪೂರ್ವ ನಿದರ್ಶನವಾಗಿ ಇಟ್ಟುಕೊಳ್ಳಬಾರದೆಂಬ ಷರತ್ತಿಗೆ ಒಳಪಟ್ಟು ಒಂದು ವಿಶೇಷ ಸಂದರ್ಭವನ್ನಾಗಿ ಪರಿಗಣಿಸಿ ಮತ್ತು ಸರ್ವೋಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 84 ಎಸ್‌ಪಿಜಿ 2002, ದಿನಾಂಕ: 11.4.2002 ರಲ್ಲಿ ಪ್ರಕಟಿಸಲಾಗಿರುವ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 2006 ಮತ್ತು 2007 ನಡುವೆ ಕ್ರಮ ಸಂಖ್ಯೆ: 2006ಎ ನ್ನಾಗಿ ಕೆಳಕಂಡಂತೆ ಸೇರ್ಪಡೆ ಮಾಡಲು ಪ್ರಸ್ತಾಪಿಸಿ, ಈ ಸೇರ್ಪಡೆಯಿಂದ ಬಾಧಿತರಾಗುವ ಯಾವುದೇ ಅಧಿಕಾರಿಯು ತಮ್ಮ ಆಕ್ಷೇಪಣೆ ಸಲಹೆಗಳಿದ್ದಲ್ಲಿ ಅದನ್ನು ಸಮರ್ಥಿಸುವಂತಹ ದೃಢೀಕೃತ ದಾಖಲಾತಿಯೊಂದಿಗೆ ಈ ತಿದ್ದುಪಡಿ ದಿನಾಂಕದಿಂದ 15 ದಿನಗಳೊಳಗಾಗಿ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ವಿಕಾಸಸೌಧ, 3ನೇ ಮಹಡಿ, ಬೆಂಗಳೂರು ಇವರಿಗೆ ಸಲ್ಲಿಸುವಂತೆ ಕೋರಲಾಗಿತ್ತು.

ಈ ಸೇರ್ಪಡೆಗೆ ಸಂಬಂಧಿಸಿದಂತೆ ನಿಗದಿತ ಸಮಯದೊಳಗೆ ಯಾವುದೇ ಆಕ್ಷೇಪಣೆ : ಸಲಹೆಗಳನ್ನು ಸ್ವೀಕರಿಸಿರುವುದಿಲ್ಲ, ಆದ್ದರಿಂದ, ದಿನಾಂಕ: 11.4.2002 ರಂದು ಹೊರಡಿಸಿರುವ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಗಳಲ್ಲಿ ಈ ಕೆಳಕಂಡಂತೆ ಸೇರ್ಪಡೆ ಮಾಡಿ ಅಂತಿಮಗೊಳಿಸಲಾಗಿದೆ. ಈ ಸೇರ್ಪಡೆಯು ಸಂವಿಧಾನ ಪೀಠದ ಮುಂದೆ ಬಾಕಿ ಇರುವ ರಿಟ್ ಅರ್ಜಿಗಳಲ್ಲಿ ನೀಡುವ ತೀರ್ಪಿಗನುಸಾರ ಪರಿಷ್ಕರಣೆಗೆ ಒಳಪಟ್ಟಿರುತ್ತದೆ.

**ಕಾರ್ಯಪಾಲಕ ಇಂಜಿನಿಯರ್ ಪದವೃಂದದ ದಿನಾಂಕ: 11.4.2002ರ ಜೇಷ್ಠತಾ ಪಟ್ಟಿಯಲ್ಲಿ**

| Sl. No. | List No. | AE Grd No. | Name of the Engineer | SC/ ST | Date of Birth | Date of Promotion | Eligibility Date | Rem arks |
|---|---|---|---|---|---|---|---|---|
| 2006A | 2 | 2933 | Mahesh M Hiremath | SC | 03/04/56 | 19/04/2002 | 26/02/1999 | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ಲಕ್ಷ್ಮೀನಾರಾಯಣ**

ಪಿ.ಆರ್. 1355 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಎ).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** 2006-07ನೇ ಸಾಲಿನಲ್ಲಿ 5 ಅಲ್ಪಸಂಖ್ಯಾತರ ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ಪ್ರಾರಂಭಿಸಲು ಸ್ಥಳ ಆಯ್ಕೆ ಮತ್ತು ವಸತಿ ಶಾಲೆಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) 2006-07ನೇ ಸಾಲಿನ ಆಯವ್ಯಯ ಭಾಷಣ.

2) ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ ಇವರ ಏಕ ಕಡತ ಸಂಖ್ಯೆ: ಅಸಂನಿ:ವಸತಿ ಶಾಲೆ:1:2006-07, ದಿನಾಂಕ: 12.04.2006.

**ಪ್ರಸ್ತಾವನೆ:**

2006-07ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಆರ್ಥಿಕ ಸಚಿವರು ರಾಜ್ಯದಲ್ಲಿ ಅಲ್ಪಸಂಖ್ಯಾತರ ವಿದ್ಯಾರ್ಥಿಗಳ ಅಭಿವೃದ್ಧಿಗಾಗಿ ಒಟ್ಟು 5 ವಸತಿ ಶಾಲೆಗಳನ್ನು ತೆರೆಯಲು ಆದೇಶಿಸಿದ್ದಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ, ಇವರು ಪ್ರಸ್ತಾವನೆ ಸಲ್ಲಿಸಿ, 2006-07ನೇ ಸಾಲಿನ ಆಯವ್ಯಯ ಭಾಷಣದಂತೆ ವಸತಿ ಶಾಲೆಗಳನ್ನು ಪ್ರಾರಂಭಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅದರಂತೆ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 78 ಅಸಂಯೋ 2006, ಬೆಂಗಳೂರು, ದಿನಾಂಕ: 30ನೇ ಜೂನ್ 2006**

ಸರ್ಕಾರವು ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿದೆ. ಅಲ್ಪಸಂಖ್ಯಾತರ ವರ್ಗದ ಬಡ ಮಕ್ಕಳ ವಿದ್ಯಾಭ್ಯಾಸಕ್ಕಾಗಿ 2006-07ನೇ ಸಾಲಿನಿಂದ ಜಾರಿಗೆ ಬರುವಂತೆ ಈ ಕೆಳಕಂಡ ಸ್ಥಳಗಳಲ್ಲಿ ಆಂಗ್ಲ ಮಾಧ್ಯಮವನ್ನು ಅಳವಡಿಸಿಕೊಂಡು ಪ್ರತಿ ಶಾಲೆಯಲ್ಲಿ ಒಂದು ಉರ್ದು ಬೋಧಕರನ್ನು ನೇಮಿಸಿಕೊಳ್ಳುವುದು.

1. ಹೊಳೆ ನರಸೀಪುರ, 2. ಗಂಗಾವತಿ 3. ರಾಯಚೂರು 4. ಹರಿಹರ ಮತ್ತು 5. ಹಾವೇರಿ.

ಈ ವಸತಿ ಶಾಲೆಗೆ ಬೇಕಾದ ಸಿಬ್ಬಂದಿಗಳ ಮತ್ತು ಇತರೆ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳ ಕುರಿತು ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎ. ಜಾವಿದ್**

ಪಿ.ಆರ್. 1338 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಸಮಾಜ ಕಲ್ಯಾಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2006-07ನೇ ಸಾಲಿನಲ್ಲಿ ಪ್ರಥಮ ಎಂ.ಬಿ.ಬಿ.ಎಸ್./ಬಿ.ಡಿ.ಎಸ್. ಕೋರ್ಸಿಗೆ ಸಿ.ಇ.ಟಿ.ಯಿಂದ ಆಯ್ಕೆಯಾದ ವಿದ್ಯಾರ್ಥಿಗಳು ಪರಸ್ಪರ ವರ್ಗಾವಣೆ ಮಾಡಿಕೊಳ್ಳಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:** ದಿನಾಂಕ: 01.08.2006 ಸಂಖ್ಯೆ: ಎಂಪಿಎಸ್/84/2005-06ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

1) ಮೇಲೆ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರವರು 2006-07ನೇ ಸಾಲಿನಲ್ಲಿ ಪ್ರಥಮ ಎಂ.ಬಿ.ಬಿ.ಎಸ್./ಬಿ.ಡಿ.ಎಸ್. ಕೋರ್ಸಿಗೆ ಸಿ.ಇ.ಟಿ. ಮೂಲಕ ಆಯ್ಕೆಯಾಗಿ ವಿವಿಧ ಕಾಲೇಜುಗಳಲ್ಲಿ ಪ್ರವೇಶ ಪಡೆದ ಕೆಲವು ವಿದ್ಯಾರ್ಥಿಗಳು ಪರಸ್ಪರ ವರ್ಗಾವಣೆಯ ಆಧಾರದ ಮೇಲೆ ಕಾಲೇಜು ಬದಲಾವಣೆ ನೀಡುವಂತೆ ಅರ್ಜಿಗಳು ಸ್ವೀಕೃತವಾಗುತ್ತಿರುವ ಕಾರಣ ಹಿಂದಿನ ವರ್ಷಗಳಲ್ಲಿ ಅನುಮತಿ ನೀಡಿರುವಂತೆ ಪ್ರಸಕ್ತ ಶೈಕ್ಷಣಿಕ ಸಾಲಿನಲ್ಲಿಯೂ ಪರಸ್ಪರ ವರ್ಗಾವಣೆಯ ಆಧಾರದ ಮೇಲೆ ವಿದ್ಯಾರ್ಥಿಗಳು ಕಾಲೇಜು ಬದಲಾವಣೆ ಮಾಡಿಕೊಳ್ಳಲು ಅವಕಾಶ ನೀಡಬಹುದೆಂದು ತಿಳಿಸುತ್ತಾ, ಅಪೇಕ್ಷಿತ ವಿದ್ಯಾರ್ಥಿಗಳಿಗೆ ಪರಸ್ಪರ ವರ್ಗಾವಣೆಯನ್ನು ನೀಡಲು ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ ಇವರಿಗೆ ಅನುಮತಿ ನೀಡುವ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2) ವೈದ್ಯಕೀಯ ಶಿಕ್ಷಣ ನಿರ್ದೇಶಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 374 ಎಂಪಿಎಸ್ 2006, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ 2006**

3) 2006-07ನೇ ಶೈಕ್ಷಣಿಕ ವರ್ಷದಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷೆ ಕೌನ್ಸಿಲಿಂಗ್ ಮೂಲಕ ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಮತ್ತು ದಂತ ಕಾಲೇಜುಗಳಲ್ಲಿ ಎಂ.ಬಿ.ಬಿ.ಎಸ್. ಕೋರ್ಸಿಗೆ ಮತ್ತು ಬಿ.ಡಿ.ಎಸ್. ಕೋರ್ಸಿಗೆ ಅನುಕ್ರಮವಾಗಿ ಪ್ರವೇಶ ಪಡೆದಿರುವ ಅಭ್ಯರ್ಥಿಗಳು ಒಂದು ವೈದ್ಯಕೀಯ ಕಾಲೇಜಿನಿಂದ ಮತ್ತೊಂದು ವೈದ್ಯಕೀಯ ಕಾಲೇಜಿಗೆ ಹಾಗೂ ಒಂದು ದಂತ ಕಾಲೇಜಿನಿಂದ ಮತ್ತೊಂದು ದಂತ ಕಾಲೇಜಿಗೆ ಈ ಕೆಳಕಂಡ ಸೂತ್ರಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೊಳಪಟ್ಟು ಪರಸ್ಪರ ವರ್ಗಾವಣೆ ಪಡೆಯಲು ಅನುಮತಿಸಲಾಗಿದೆ.

(1) ಪ್ರವರ್ಗ-ಎ ಖಾಸಗಿ ವೈದ್ಯಕೀಯ ಮತ್ತು ದಂತ ಕಾಲೇಜುಗಳ ಸರ್ಕಾರಿ ಸೀಟುಗಳಿಂದ ಪ್ರವರ್ಗ-ಎ ಸರ್ಕಾರಿ ಸೀಟುಗಳಿಗೆ.

(2) ಪ್ರವರ್ಗ-ಬಿ ಖಾಸಗಿ ವೈದ್ಯಕೀಯ ಮತ್ತು ದಂತ ಕಾಲೇಜುಗಳ ಸರ್ಕಾರಿ ಸೀಟುಗಳಿಂದ ಪ್ರವರ್ಗ-ಬಿ ಸರ್ಕಾರಿ ಸೀಟುಗಳಿಗೆ.

(3) ಸರ್ಕಾರಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಿಂದ ಮತ್ತೊಂದು ಸರ್ಕಾರಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಿಗೆ.

4) ಪರಸ್ಪರ ವರ್ಗಾವಣೆಗೆ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ತಲಾ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವರ್ಗಾವಣೆ ಶುಲ್ಕವನ್ನು ಪಡೆಯತಕ್ಕದ್ದು. ಅದನ್ನು ಸರ್ಕಾರದ ನಿಧಿಗೆ ಜಮಾ ಮಾಡತಕ್ಕದ್ದು.

5) ಒಮ್ಮೆ ಪರಸ್ಪರ ವರ್ಗಾವಣೆ ಪಡೆದ ಅಭ್ಯರ್ಥಿಗಳು ಯಾವುದೇ ಕಾರಣಕ್ಕೂ ಮತ್ತೊಮ್ಮೆ ಪರಸ್ಪರ ವರ್ಗಾವಣೆಯಾಗಲೀ ಅಥವಾ ಯಾವುದೇ ಸ್ವರೂಪದ ವರ್ಗಾವಣೆಗಾಗಲೀ ಅರ್ಹರಾಗಿರುವುದಿಲ್ಲ.

6) ಪರಸ್ಪರ ವರ್ಗಾವಣೆಯನ್ನು ಪಡೆಯುವ ಪ್ರತಿಯೊಬ್ಬ ಅಭ್ಯರ್ಥಿಯು ಅವರ ಸ್ವಂತ ಜವಾಬ್ದಾರಿಯ ಮೇಲೆ (At their own risk) ಒಂದು ವೈದ್ಯಕೀಯ/ದಂತ ಕಾಲೇಜಿನಿಂದ ಮತ್ತೊಂದು ವೈದ್ಯಕೀಯ/ದಂತ ಕಾಲೇಜಿಗೆ ದಿನಾಂಕ: 23.09.2006ಕ್ಕೆ ಮೊದಲು ಪುನರ್ ಸೇರತಕ್ಕದ್ದು. ಇದಕ್ಕೆ ಪೂರಕವಾಗಿ ಪ್ರತಿಯೊಬ್ಬ ಅಭ್ಯರ್ಥಿಯು ಎರಡು ಸಾಕ್ಷಿಗಳ ಸಮೇತ ಮುಚ್ಚಳಿಕೆಯನ್ನು ವೈದ್ಯಕೀಯ ಶಿಕ್ಷಣ ನಿರ್ದೇಶಕರ ಸಮ್ಮುಖದಲ್ಲಿ ಬರೆದುಕೊಡಬೇಕು.

7) ಪರಸ್ಪರ ವರ್ಗಾವಣೆ ಬಯಸುವ ಪ್ರತಿಯೊಬ್ಬ ಅಭ್ಯರ್ಥಿಯು ಈಗ ವ್ಯಾಸಂಗ ಮಾಡುತ್ತಿರುವ ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರಿಂದ ಹಾಗೂ ಯಾವ ವೈದ್ಯಕೀಯ ಕಾಲೇಜಿಗೆ ವರ್ಗಾವಣೆ ಬಯಸಿದ್ದಾರೆಯೋ ಅಂತಹ ಕಾಲೇಜಿನ ಪ್ರಾಂಶುಪಾಲರಿಂದ ನಿರಾಕ್ಷೇಪಣಾ ಪತ್ರವನ್ನು ಲಿಖಿತವಾಗಿ ಪಡೆಯಬೇಕು. ಕಾಲೇಜಿನ ಪ್ರವೇಶದಲ್ಲಿ ಯಾವುದೇ ಅಡಚಣೆಯಾದಲ್ಲಿ ಅದಕ್ಕೆ ವಿದ್ಯಾರ್ಥಿಗಳೇ ವೈಯಕ್ತಿಕವಾಗಿ ಜವಾಬ್ದಾರರಾಗಿರುತ್ತಾರೆ.

8) ಪರಸ್ಪರ ವರ್ಗಾವಣೆ ಬಯಸುವ ಅಭ್ಯರ್ಥಿಗಳ ವರ್ಗಾವಣೆಯನ್ನು ದಿನಾಂಕ: 23.09.2006ಕ್ಕೆ ಮೊದಲು ಅಂತಿಮಗೊಳಿಸಬೇಕು ಮತ್ತು ದಿನಾಂಕ: 23.09.2006ರ ಒಳಗಾಗಿ ವರ್ಗಾವಣೆಗೊಂಡ ಅಭ್ಯರ್ಥಿಗಳು ಸಂಬಂಧಿಸಿದ ಕಾಲೇಜಿಗೆ ಸೇರತಕ್ಕದ್ದು. ಯಾವುದೇ ಕಾರಣಕ್ಕೂ ಪರಸ್ಪರ ವರ್ಗಾವಣೆ ಕಾಲಮಿತಿಯನ್ನು ವಿಸ್ತರಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 1347 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**FOREST, ECOLOGY AND ENVIRONMENT SECRETARIAT**

**Subject:** Transfer of lease to investors/power producers in respect of diversion of 96.790 ha. of forest land for establishment of 46.4 MW Wind Powerproject in favour of M/s J.N. Investments & Trading Company Limited in Tumkur (52.130) ha. in Dasudi RF of Bukkapatna Range) and Chitradurga (44.660 ha. in Marikanive RF in Hiriyur/ Hosadurga Ranges) Districts of Karnataka.

**Read:**
1) Letter No. F.No.8-98/2005-FC, dated: 2.1.2006 of Government of India, Ministry of Environment and Forests, New Delhi.
2) Government Order No. FEE 163 FLL 2005, dated: 25.1.2006.
3) Letter No. A5(5)GFL.JN.CR.10/05-06, dated: 18.7.2006 of the Principal Chief Conservator of Forests, Bangalore.
4) State Government letter No. FEE 141 FLL 2006, dated: 22.7.2006.
5) Letter No. F.No.8-98/2005-FC, dated: 23.8.2006 of Government of India, Ministry of Environment and Forests, New Delhi.

**PREAMBLE:**

Government of India in its letter read at (1) above has accorded approval under Forest (Conservation) Act, 1980 for diversion of 96.790 ha. of forest land for establishment of 46.4 MW Wind Power Project in favour of M/s J.N. Investments & Trading Company Limited in Tumkur District (52.130) ha. in Dasudi RF of Bukkapatna Range) and Chitradurga District (44.660 ha. in Marikanive RF in Hiriyur/Hosadurga Ranges) of Karnataka subject to certain conditions. Accordingly in Government Order dated: 25.1.2006 read at (2) above sanction has been accorded for diversion of said land in favour M/s J.N. Investments & Trading Company Limited subject to certain conditions.

The Principal Chief Conservator of Forests, Bangalore vide his letter dated: 8.7.2006 read at (3) above had submitted proposal to obtain the approval of Government of India as per the Government of India's guidelines dated: 14.5.2004 issued under Forest (Conservation) Act, 1980 for transfer of lease of forest lands diverted for establishment of Wind Power Project to the New User Agencies i.e. investor/Power Producers according to the following statement.

| Name of the Division | Forest land diverted | Name of the Investor/new user agency | Area proposed for transfer | | | |
|---|---|---|---|---|---|---|
| | | | Village & Sy.No. | No. of WEGs to be transferred (800 KW each) | Extent (in ha.) | Balance are with original user agency |
| Tumkur | 52.130 | M/s Enercon Wind farms (Hindustan) Private Limited Bangalore | Dasudi-98 | 7 | 13.920 | |
| | | | Dasudi-99 | 6 | 1.140 | |
| | | | Dasudi-102 | 7 | 0.280 | |
| | | | Dasudi-117 | | 0.650 | |
| | | | Dasudi-113 | | 0.180 | |
| | | | Dasudi-106 | | 0.030 | |
| | | | Dasudi-107 | | 0.190 | |
| | | | Dasudi-114 | | 0.190 | |
| | | | Dasudi-112 | | 0.200 | |
| | | | Nulenur-10 | 5 | 10.100 | |
| | | | Ganadalu-15 | 6 | 9.980 | |
| | | | Somanahalli-28 | | 7.970 | |
| | | | Borankanive-12 | | 7.300 | |
| | | Total | | 31 of 800 KW=24.8 MW | 52.130 | |
| C'Durga | 44.660 | M/s Enercon Wind Farms (Hindustan) Private Limited Bangalore | Chikkabyaladi-131 | 3 | 9.302 | |
| | | | Kanubehalli-38 | 3 | 4.483 | |
| | | | Kanubehalli-39 | 8 | 9.529 | |
| | | | Arasinagundi-25 | 3 | 3.123 | |
| | | | Arasinagundi-24 | 5 | 8.250 | |
| | | | Arasinagundi-16 | | 7.413 | |
| | | | Elladakere-51 | | 1.100 | |
| | | | Elladakere-52 | | 1.460 | |
| | | Total | | 27 of 800 KW=21.6 MW | 44.660 | |

The original user agency M/s J.N. Investments & Trading Company Limited has proposed to transfer the entire leased out forest land i.e., 96.790 ha. to the new user agencies. The original user

agency has submitted N.O.C. for such transfer and new user agencies have submitted an under taking that they will abide by the conditions stipulated by Government of India and Government of Karnataka.

Accordingly the proposal was recommended to Government of India vide State Government letter dated: 22.7.2006 read at (4) above.

Government of India, Ministry of Environment and Forests, New Delhi vide their letter dated: 23.8.2006 read at (5) above has conveyed its approval for transfer of lease from J.N. Investments & Trading Company Limited, the original user agency, to new User Agencies i.c., investors/power producers, subject to certain conditions.

The proposal has been examined in detail and hence the order.

**GOVERNMENT ORDER No. FEE 141 FLL 2006, Bangalore, Dated: 30th August 2006**

In the circumstances explained above, Government are pleased to accord sanction under Section 2 of Forest (Conservation) Act, 1980 for transfer of lease from J.N. Investments & Trading Company Limited, the orginal User Agency, to the new User Agencies i.e., the investors/powers producers indicated below:

| Name of the Division | Forest land diverted | Name of the Investor/new user agency | Area proposed for transfer | | | |
|---|---|---|---|---|---|---|
| | | | Village & Sy.No. | No. of WEGs to be transferred (800 KW each) | Extent (in ha.) | Balance are with original user agency |
| Tumkur | 52.130 | M/s Enercon Wind farms (Hindustan) Private Limited Bangalore | Dasudi-98 | 7 | 13.920 | |
| | | | Dasudi-99 | 6 | 1.140 | |
| | | | Dasudi-102 | 7 | 0.280 | |
| | | | Dasudi-117 | | 0.650 | |
| | | | Dasudi-113 | | 0.180 | |
| | | | Dasudi-106 | | 0.030 | |
| | | | Dasudi-107 | | 0.190 | |
| | | | Dasudi-114 | | 0.190 | |
| | | | Dasudi-112 | | 0.200 | |
| | | | Nulenur-10 | 5 | 10.100 | |
| | | | Ganadalu-15 | 6 | 9.980 | |
| | | | Somanahalli-28 | | 7.970 | |
| | | | Borankanive-12 | | 7.300 | |
| | | Total | | 31 of 800 KW=24.8 MW | 52.130 | |
| C'Durga | 44.660 | M/s Enercon Wind Farms (Hindustan) Private Limited Bangalore | Chikkabyaladi-131 | 3 | 9.302 | |
| | | | Kanubehalli-38 | 3 | 4.483 | |
| | | | Kanubehalli-39 | 8 | 9.529 | |
| | | | Arasinagundi-25 | 3 | 3.123 | |
| | | | Arasinagundi-24 | 5 | 8.250 | |
| | | | Arasinagundi-16 | | 7.413 | |
| | | | Elladakere-51 | | 1.100 | |
| | | | Elladakere-52 | | 1.460 | |
| | | Total | | 27 of 800 KW=21.6 MW | 44.660 | |

The transfer of lease is subject to the condition that the new User Agencies, i.c, the investors/powers producers, shall abide by all the conditions imposed by the Central Government/State Government/Principal Chief Conservator of Forests for diversion of 96.790 ha. of forest land in favour of J.N. Investments & Trading company Limited, for establishment of 46.4 MW Wind Power Project in Tumkur (52.130 ha. in Dasudi RF of Bukkapatna Range) and Chitradurga (44.660 ha. in Marikanive RF in Hiriyur/Hosadurga Rangs) districts of Karnataka.

By Order and in the name of the Governor of Karnataka,

**P.R. KALAVATHI**

Under Secretary to Government,

Forest, Ecology and Environment Department.

P.R. 1348